CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧, ೨೦೦೫ ( ಭಾದ್ರಪದ ೧೦, ಶಕ ವರ್ಷ ೧೯೨೭) | ಸಂಚಿಕೆ ೩೫ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಜಿ.ಮುಜಾವರ, ಸಿಹೆಚ್‌ಸಿ ೧೦೭೪, ಬೆಳಗಾಂ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-೨/ಇವಿ-೪೫/೨೦೦೦/ಆಪು ಸಂಖ್ಯೆ:೪/೨೦೦೩ ದಿನಾಂಕ:೦೧-೦೪-೨೦೦೩.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು ೮೯/ಉವ/೨೦೦೪ ದಿನಾಂಕ: ೧೫-೦೪-೨೦೦೪.
3. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿ ದಿ:೨೩-೦೮-೨೦೦೪.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರದ ಸಂಖ್ಯೆ:ಅಪೀಲು/೨/೫೨/೨೦೦೪.ದಿನಾಂಕ:೧೭-೦೩-೨೦೦೫.

**ಪ್ರಸ್ತಾವನೆ:**

ಶ್ರೀ ಎಂ.ಜಿ.ಮುಜಾವರ, ಸಿಹೆಚ್‌ಸಿ ೧೦೭೪, ಬೆಳಗಾವಿ ಜಿಲ್ಲೆ, ಇವರ ವಿರುದ್ಧ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ ೧೯೬೫ರ ನಿಯಮ ೬ ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**'' ಆಪಾದಿತ ಪೊಲೀಸ್ ಅಧಿಕಾರಿ ಎಂ.ಜಿ.ಮುಜಾವರ, ಸಿಹೆಚ್‌ಸಿ ೧೦೭೪, ನಂದಗಡ ಠಾಣೆ ರವರಾದ ನೀವು ೧) ದಿನಾಂಕ:೦೭-೧೨-೨೦೦೦ ರಂದು ನಂದಗಡ ಠಾಣೆಯ ಕೇಂದ್ರ ಸ್ಥಾನದಲ್ಲಿರದೇ, ಯಾರ ಅನುಮತಿಯನ್ನು ಪಡೆಯದೇ, ಕೇಂದ್ರ ಸ್ಥಾನ ಬಿಟ್ಟು, ಬೆಳಗಾವಿಯಲ್ಲಿ ಇದ್ದಿರುವಿರಿ. ೨) ದಿನಾಂಕ:೦೭-೧೨-೨೦೦೦ ರಂದು ರಾತ್ರಿ ಸುಮಾರು ೨೦-೧೫ ಗಂಟೆಯಿಂದ ೨೦-೩೦ ಗಂಟೆಯ ಅವಧಿಯಲ್ಲಿ ನೀವು ನಿಮ್ಮ ಸಂಗಡ ಹಲವಾರು ಜನರನ್ನು ಕರೆದುಕೊಂಡು ಬೆಳಗಾವಿಯ ಶ್ರೀಮತಿ ಬಿನಾಬಾಯಿ ಮ.ಚೌಗಲೆ ರವರ ಮನೆಗೆ ಹೋಗಿ ಅವರೊಂದಿಗೆ ಜಗಳ ತೆಗೆದದ್ದಲ್ಲದೆ, ಅವರ ಮನೆಯ ಮೇಲೆ ಮತ್ತು ಗ್ಯಾಂಗ್‌ವಾಡಿ ಜನರ ಮನೆಗಳ ಮೇಲೆ ಕಲ್ಲು ತೂರಾಡಿ, ಹೆಂಚುಗಳನ್ನು ಒಡೆದು, ಜನರನ್ನು ಅವಾಚ್ಯ ಶಬ್ದಗಳಿಂದ ಬೈಯುತ್ತಾ, ರಸ್ತೆಯ ಪಕ್ಕಕ್ಕೆ ನಿಂತಂತಹ ಆಟೋ ರಿಕ್ಷಾಗೆ ಕಲ್ಲೆಸೆದು, ಅದರ ಗಾಜುಗಳನ್ನು ಒಡೆದು ಹಾನಿ ಪಡಿಸಿ ಘೋರ ದುರ್ನಡತೆ ಪ್ರದರ್ಶಿಸಿರುವಿರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆಯೆಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (೧) ರಲ್ಲಿ ಓದಲಾದ ದಿನಾಂಕ:೦೧-೦೪-೨೦೦೩ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆ ಹಿಡಿಯುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರಿಗೆ ವಿಧಿಸಿರುವ ಶಿಕ್ಷೆಯು ದೋಷರೋಪಕ್ಕೆ ತಕ್ಕಂತೆ ಇರದೇ ಹೆಚ್ಚಿನ ಶಿಕ್ಷೆ ವಿಧಿಸಿದ್ದನ್ನು ಕಂಡು, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಮೇಲೆ ಕ್ರಮ ಸಂಖ್ಯೆ:(೨)ರಲ್ಲಿ ಓದಲಾದ ಆದೇಶದಲ್ಲಿ, ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳವರೆಗೆ ತಡೆ ಹಿಡಿಯುವ ದಂಡನೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರಿಗಳು ಅರ್ಜಿದಾರರಿಗೆ ವಿಧಿಸಿರುವ ಶಿಕ್ಷೆಯು ದೋಷರೋಪಕ್ಕೆ ತಕ್ಕಂತೆ ಇರದೆ, ಹೆಚ್ಚಿನ ಶಿಕ್ಷೆ ವಿಧಿಸಿದ್ದನ್ನು, ಮನಗಂಡು, ಮೇಲ್ಮನವಿ ಪ್ರಾಧಿಕಾರಿಗಳು ಈ ಆದೇಶವನ್ನು ಮಾರ್ಪಡಿಸಿ ಲಘು ಶಿಕ್ಷೆಯನ್ನು ವಿಧಿಸಿದ್ದು, ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇರದೆ ಇರುವುದರಿಂದ ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ ೧೮೨ ಪೊಸಿಅ ೨೦೦೪ ಬೆಂಗಳೂರು ದಿನಾಂಕ:೧೫ನೇ ಜುಲೈ ೨೦೦೫.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರಿ ಎಂ.ಜಿ.ಮುಜಾವರ ಸಿಹೆಚ್‌ಸಿ ೧೦೭೪, ಬೆಳಗಾವಿ ಜಿಲ್ಲೆ, ಇವರು ದಿನಾಂಕ:೨೩-೦೮-೨೦೦೪ರಂದು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ಗುಂಡೂರಾವ್**

ಪಿ.ಆರ್.೧೦೪೭ ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ :** ಖಾಸಗಿ ವಕೀಲರನ್ನು ಸರ್ಕಾರದ ಪರವಾಗಿ ಪ್ರಕರಣಗಳನ್ನು ನಡೆಸಲು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದ ಪ್ರಕರಣಗಳಲ್ಲಿ ಸಂಭಾವನೆ: ಶುಲ್ಕ ನಿಗಧಿಗೊಳಿಸುವ ಬಗ್ಗೆ ಸಮಿತಿಯ ರಚನೆ:

**ಓದಲಾಗಿದೆ :** ದಿನಾಂಕ: 18.05.2005 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ ಒಳಾಡಳಿತ ಇಲಾಖೆ ಇವರ ಕೊಠಡಿಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಕರ್ನಾಟಕ ಕಾನೂನು ಅಧಿಕಾರಿಗಳು (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿ 1977 ರ ನಿಯಮ 30ರಲ್ಲಿ ಯಾವುದೇ ಅಪರಾಧಿಕ ಪ್ರಕರಣ ಅಥವಾ ಯಾವುದೇ ಮೇಲ್ಮನವಿ ಅಥವಾ ಅದಕ್ಕೆ ಸಂಬಂಧಿಸಿದ ಯಾವುದೇ ನಡವಳಿಗಳನ್ನು ಸರ್ಕಾರದ ಪರವಾಗಿ ನಡೆಸಲು ಯಾವುದೇ ವಕೀಲರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲು ಸರ್ಕಾರಕ್ಕೆ ಅಧಿಕಾರವನ್ನು ಪ್ರದತ್ತಗೊಳಿಸುವ ಉಪಬಂಧವನ್ನು ಮಾಡಲಾಗಿದೆ ಮತ್ತು ಹಾಗೆ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲ್ಪಟ್ಟ ವಕೀಲರಿಗೆ ಪ್ರತಿಯೊಂದು ಪ್ರಕರಣದಲ್ಲೂ ಪ್ರಕರಣದ ಸ್ವರೂಪವನ್ನು ಗಮನದಲ್ಲಿರಿಸಿ ಸರ್ಕಾರವು ನಿರ್ಧರಿಸಬಹುದಾದಂತಹ ಸಂಭಾವನೆಯನ್ನು ಸಂದಾಯಿಸಬಹುದಾಗಿದೆ.

ಯಾವುದೇ ಪ್ರಕರಣದಲ್ಲಿ ಅಥವಾ ಪ್ರಕರಣಗಳ ವರ್ಗದಲ್ಲಿ ಯಾವುದೇ ವಕೀಲರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲ್ಪಟ್ಟ ಪ್ರಕರಣಗಳಲ್ಲಿ ಪ್ರಕರಣದ ಪ್ರಾಮುಖ್ಯತೆ: ಸಂಕೀರ್ಣತೆ ಮತ್ತು ಪ್ರಕರಣದ ಸ್ಥಿತಿಗತಿ, ಪ್ರಕರಣದಲ್ಲಿನ ವಿಚಾರಣೆಯ ಸ್ವರೂಪ, ನ್ಯಾಯಾಲಯ ಇರುವ ಸ್ಥಳ ಮತ್ತು ವಕೀಲರ ವಾಸಸ್ಥಳ ಇತ್ಯಾದಿ ಅಂಶಗಳನ್ನು ಪರಿಶೀಲಿಸಿ ವಕೀಲರ ಸಂಭಾವನೆ: ಶುಲ್ಕವನ್ನು ನಿಗಧಿಗೊಳಿಸಲು ಒಂದು ಸಮಿತಿಯನ್ನು ರಚಿಸುವ ಅಗತ್ಯ ಕಂಡು ಬಂದಿರುವುದರಿಂದ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 540 ಪಿಪಿಇ 2005, ಬೆಂಗಳೂರು, ದಿನಾಂಕ: 18ನೇ ಜುಲೈ 2005**

ಯಾವುದೇ ಪ್ರಕರಣ ಅಥವಾ ಪ್ರಕರಣಗಳ ವರ್ಗಗಳಲ್ಲಿ ಸರ್ಕಾರದ ಪರವಾಗಿ ಅಪರಾಧಿಕ ಪ್ರಕರಣಗಳನ್ನು ನಡೆಸಲು ಯಾವುದೇ ವಕೀಲರನ್ನು: ನ್ಯಾಯವಾದಿಗಳನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲ್ಪಟ್ಟ ಪ್ರಕರಣಗಳಲ್ಲಿ ಅಂಥಹ ವಕೀಲರ ಸಂಭಾವನೆ: ಶುಲ್ಕವನ್ನು ನಿರ್ಧರಿಸುವ ಬಗ್ಗೆ ಈ ಕೆಳಕಂಡ ಸಂಭಾವನೆ ನಿರ್ಧಾರಣಾ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | ಸದಸ್ಯರು |
| 3. | ಸರ್ಕಾರದ ಅಪರ ಕಾರ್ಯದರ್ಶಿ-1, ಕಾನೂನು ಇಲಾಖೆ | ಸದಸ್ಯರು |
| 4. | ಸರ್ಕಾರದ ಜಂಟಿ ಕಾರ್ಯದರ್ಶಿ, (ಕಾ. ಮತ್ತು ಸು.) ಒಳಾಡಳಿತ ಇಲಾಖೆ | ಸಂಚಾಲಕರು |

ಸದರಿ ಸಮಿತಿಯು ತಿಂಗಳಿಗೊಮ್ಮೆ ಅಥವಾ ಅತ್ಯಾವಶ್ಯಕತೆ ಅನುಸರಿಸಿ ನಿಗಧಿಗೊಳಿಸಬಹುದಾದ ದಿನಾಂಕದಂದು ಸಭೆ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಕೆ. ಗುಂಡೂರಾವ್**

ಪಿ.ಆರ್.1031 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಒಳಾಡಳಿತ ಇಲಾಖೆ.

(ಕಾ. ಮತ್ತು ಸು. ಮತ್ತು ಅಭಿಯೋಗಗಳು).

## KARNATAKA LEGISLATIVE COUNCIL SECRETARIAT

**Sub :** Participation of Sri V. R. Sudarshan, Hon'ble Chairman, Karnataka Legislative Council and Sri V. Shreesh, Joint Secretary, Karnataka Legislative Council in the meeting of National Conference of State Legislatures from 16th to 20th August 2005 at Seattle, Washington. (USA) Payment of advances TA and DA-Sanction reg.

**Read :**
1. Letter dated: 11th April 2005, of the President National Conference of State Legislatures the Chairman Health and Government Operation Committee Maryland House of Delegates.
2. Itinerary of the Hon'ble Chairman, Karnataka Legislative Council and Sri V. Shreesh, Joint Secretary, Karnataka Legislative Council Secretariat.
3. Letter No. FD 797 EXP 7.2005, dated: 23.07.2005 of the Finance Department, Government of Karnataka.

**Preamble:**

The meeting of the National Conference of State Legislatures will be held at Seattle, Washington from 16th to 20th August 2005. The meeting provides a valuable forum for Legislators around the globe to discuss many problems and share their experiences and help their respective countries grow stronger. The proposal to depute Sri V. R. Sudharshan, Hon'ble Chairman, Karnataka Legislative Council and Sri V. Shreesh, Joint Secretary, Karnataka Legislative Council to participate in the meeting of National Conference of State Legislatures to be held at Seattle, Washington (USA) was approved by the Hon'ble Special Board of Karnataka Legislature consisting of Hon'ble Chief Minister, Government of Karnataka, who is its Chairman and Hon'ble Deputy Chief Minister (also Finance Minister) Hon'ble Minister for Law and Parliamentary Affairs, Government of Karnataka, Hon'ble Chairman, Karnataka Legislative Council, Hon'ble Speaker, Karnataka Legislative Assembly who are members of the Special Board on dated: 25.07.2005. The Karnataka Legislative Council Secretariat will have to bear the entire expenditure in connection with this foreign Tour. The Finance Department, Government of Karnataka, vide their letter No. FD/797/EXP-7/2005, dated: 23.07.2005 have agreed to release the funds as follows.

| Name of the Participants | Air Fare | Registration charges | Local Transport Allowance | DA Including Personal Incidentals etc., | Total |
|---|---|---|---|---|---|
| Sri V. R. Sudharshan, Hon'ble Chairman, Karnataka Legislative Council. | 3,02,462 | 20695.75 ($ 475) ($=43.57 Rs) | 5446 ($125) ($=43.57 Rs) | 80,985.73 ($ 1858.75) | 4,09,589.00 |
| Sri V. Shreesh, Joint Secretary, Karnataka Legislative Council | 97,337 | 20695.75 ($ 475) | 5446 ($125) | 60,072.00 ($ 1378.75) | 1,83,551.00 |

**Order No. KLCS/ADM-1/65/NCSL/2005 Bangalore, dated: 27th July 2005.**

Sanction is accorded for the Participation of Sri V. R. Sudharshan, Hon'ble Chairman, Karnataka Legislative Council and Sri V. Shreesh, Joint Secretary, Karnataka Legislative Council to attend the annual meeting of National Conference of State Legislatures to be held at Seattle, Washington (USA) from 16th to 20th August 2005, Sri V. R. Sudharshan, Hon'ble Chairman, Karnataka Legislative Council, is entitled to Travel Expenses advance of Rs. 4,09,000.00 Head of Account "Hon'ble Chairman Legislative Council-2011-02-102-0-01-041-Travel Expenditure. (Charged) and Sri V. Shreesh, Joint Secretary, Karnataka Legislative Council is entitled to advance Travel expense of Rs.1,83,000.00 Head of Account "Karnataka Legislative Council Secretariat-2011-02-103-2-01-041- Travel Expenditure. (Voted)" subject to adjustment in the final Travelling Allowance bill.

By Order of the Special Board,
**H. D. NAGARAJA**
Under Secretary,
Karnataka Legislative Council.

PR-1104

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ವಿ.ವಿ. ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಂದ ದಂಡನೆ ವಿಧಿಸಿದ ಸರ್ಕಾರಿ ಆದೇಶದ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದ ಕುರಿತು ಹಾಗೂ ಮೇಲ್ಮನವಿಯನ್ನು ವಜಾ ಮಾಡಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
೧ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೧೩೧ ಎಸ್‌ಇಎಸ್ ೦೨ ದಿನಾಂಕ ೭.೩.೨೦೦೫.
೨. ಶ್ರೀ ವಿ.ವಿ. ಪುಣೇದ್, ಕೆಎಎಸ್ ಅಧಿಕಾರಿ ಅವರ ದಿನಾಂಕ ೧೫.೪.೨೦೦೫ರ ಮೇಲ್ಮನವಿ

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯಲ್ಲಿ ಶ್ರೀ ಓ. ಕಿಶನ್ ಚಂದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ದಿನಾಂಕ ೧೦.೧೧.೯೨ ರಿಂದ ೧೦.೫.೯೫ರವರೆಗೆ ಹಾಗೂ ಶ್ರೀ ವಿ.ವಿ. ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಯವರು ದಿನಾಂಕ

೨೨.೫.೯೫ ರಿಂದ ೨೩.೫.೯೫ರವರೆಗೆ ಮಂಡಳಿಯ ಕಾರ್ಯದರ್ಶಿಯ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಶ್ರೀ ಓ.ಕಿಶನ್ ಚಂದ್ ಅವರು ೫ ಜನ ಅಭ್ಯರ್ಥಿಗಳನ್ನು ಹಾಗೂ ಶ್ರೀ ವಿ.ವಿ. ಪುಣೇದ್ ಅವರು ೩ ಜನ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳನ್ನು ಉಲ್ಲಂಘಿಸಿ ನೇಮಕ ಮಾಡಿದ ಆರೋಪಕ್ಕಾಗಿ ಮೇಲ್ಕಂಡ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿ ಸಲ್ಲಿಸಿರುವುದನ್ನು ಪರಿಶೀಲಿಸಿ ಅದನ್ನು ಒಪ್ಪಿಕೊಂಡ ಸರ್ಕಾರವು ಮೇಲೆ (೧)ರಲ್ಲಿ ಓದಲಾದ ದಿನಾಂಕ ಒ.೩.೨೦೦೫ರ ಸರ್ಕಾರದ ಆದೇಶದಲ್ಲಿ ಶ್ರೀ ಓ.ಕಿಶನ್ ಚಂದ್ ಮತ್ತು ಶ್ರೀ ವಿ.ವಿ.ಪುಣೇದ್, ಕೆಎಎಸ್ ಅಧಿಕಾರಿಗಳು ಅವರುಗಳಿಗೆ ಕ್ರಮವಾಗಿ ತಲಾ ೨ ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೮(iii) ರನ್ವಯ ವಿಧಿಸಿ ಆದೇಶ ಹೊರಡಿಸಲಾಯಿತು.

ಈ ದಂಡನೆ ಆದೇಶದ ವಿರುದ್ಧ ಶ್ರೀ ವಿ.ವಿ. ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೮ರಂತೆ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಇನ್ನೊಬ್ಬ ಕೆಎಎಸ್ ಅಧಿಕಾರಿಯಾದ ಶ್ರೀ ಓ.ಕಿಶನ್ ಚಂದ್ ಅವರು ಸದರಿ ದಂಡನೆ ಆದೇಶದ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಿರುವುದಿಲ್ಲ. ಶ್ರೀ ವಿ.ವಿ. ಪುಣೇದ್ ಅವರು ಸಲ್ಲಿಸಿರುವ ತಮ್ಮ ಮೇಲ್ಮನವಿಯಲ್ಲಿ ತಮ್ಮ ಮೇಲೆ ವಿಧಿಸಿದ ದಂಡನೆಯನ್ನು ರದ್ದುಗೊಳಿಸಲು ಕೋರಿರುತ್ತಾರೆ.

ಶ್ರೀ ವಿ.ವಿ. ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಸಲ್ಲಿಸಿರುವ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿರುತ್ತದೆ.

| PARA | REMARKS |
|---|---|
| 1. ಶಿಸ್ತು ಪ್ರಾಧಿಕಾರಿಯು ಹೊರಡಿಸಿರುವ ೫ ಆರೋಪ ಗಳಲ್ಲಿ ಸ್ಪಷ್ಟತೆ ಇರುವುದಿಲ್ಲ. ಒಂದನೇ ಆರೋಪದಲ್ಲಿ "ನೇಮಕಾತಿ ನಿಯಮಗಳನ್ನು ಉಲ್ಲಂಘಿಸಿ" ಮೂರು ಅಭ್ಯರ್ಥಿಗಳನ್ನು ನೇಮಕ ಮಾಡಿಕೊಂಡಿರುವುದಾಗಿ ಆಪಾದಿಸಲಾಗಿದೆ. ಸದರಿ ಹುದ್ದೆಗಳನ್ನು ದಿನಾಂಕ ೨೩.೬.೮೪ರಲ್ಲಿ ಸೃಜಿಸಿದ್ದು, ಈ ದಿನಾಂಕದವರೆಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಹೊರಡಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಯಾವ ನಿಯಮಾವಳಿಗಳನ್ನು ಉಲ್ಲಂಘಿಸಲಾಗಿದೆ? ಅಂತಹ ನಿಯಮಗಳಲ್ಲಿ ಯಾವ ಯಾವ ಉಪಬಂಧಗಳನ್ನು ಉಲ್ಲಂಘಿಸಲಾಗಿದೆ ಎಂಬ ಬಗ್ಗೆ ಸ್ಪಷ್ಟತೆ ಇರುವುದಿಲ್ಲ. ಉಳಿದ ಎಲ್ಲಾ ನಾಲ್ಕು ಆರೋಪ ಗಳಲ್ಲಿ ಸ್ಪಷ್ಟತೆ ಇರುವುದಿಲ್ಲ. ಈ ರೀತಿ ಸ್ಪಷ್ಟತೆ ಇಲ್ಲದೆ ಹೊರಡಿಸಿರುವ ಆರೋಪಗಳ ಬಗ್ಗೆ ಪ್ರತಿರಕ್ಷಣೆ ಮಾಡಿಕೊಳ್ಳಲು ಆಪಾದಿತರಿಗೆ ಸಾಧ್ಯವಾಗುವುದಿಲ್ಲ. | The appellant has questioned the correctness of the article of charges. The Article of charges clearly spells out the nature of irregularities committed by him. He cannot take defence under the pretext that the C&R Rules are not yet finalised for the Karnataka Temperance Board. The irregularities committed by him are quite serious such as appointing clerk cum typist against the post of typist, and candidates without prescribed qualification to some posts etc. Therefore his argument is not valid. |
| 2. ಆರೋಪ ಪಟ್ಟಿಯ ಅನುಬಂಧ-೩ರಲ್ಲಿ ನಮೂದಿಸಿರುವ ಮೂರು ಸಾಕ್ಷಿಗಳ ಪೈಕಿ ಮೂರನೇ ಸಾಕ್ಷಿದಾರರಾದ ಶ್ರೀ ಡಿ.ಬಿ. ಚೆನ್ನವೀರಯ್ಯ, ವಿಷಯ ನಿರ್ವಾಹಕರನ್ನು ಮಾತ್ರ ವಿಚಾರಣೆಗೊಳಪಡಿಸಲಾಗಿದ್ದು, ಇವರು ತಮ್ಮ ಸಾಕ್ಷಿ ಹೇಳಿಕೆಯಲ್ಲಿ ನಿಶಾನೆ ಪಿ-೧ ರಿಂದ ಪಿ-೧೨ ರವರೆಗೆ ದಸ್ತಾವೇಜುಗಳನ್ನು ಗುರುತಿಸಿದ್ದಾರೆ. ಆದರೆ ಇವರ ಸಾಕ್ಷಿ ಹೇಳಿಕೆಯಲ್ಲಿಆಪಾದಿತರು ಯಾವ ನಿಯಮವನ್ನು ಉಲ್ಲಂಘಿಸಿದ್ದಾರೆ? ಮಂಡಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳು ಇಲ್ಲದಿರುವಾಗ ಯಾವ ನಿಯಮ ಗಳನ್ನು ಪಾಲಿಸಬೇಕಿತ್ತು? ಇತ್ಯಾದಿಗಳ ಬಗ್ಗೆ ಸಾಕ್ಷಿ ನುಡಿದಿರುವುದಿಲ್ಲ. ಆದ್ದರಿಂದ ಇವರ ಸಾಕ್ಷಿ ಹೇಳಿಕೆಯಿಂದ ಆರೋಪ ಸಾಬೀತಾಗುವುದಿಲ್ಲ. | It is the presenting officer who presents the case before the Enquiry Officer on behalf of the disciplinary authority. The witnesses have only the duty to testify to the charges. The statement of witnesses need not be elaborate. Therefore his argument has no force. |
| 3. ಆಪಾದಿತರು ಕೆಎಎಸ್ ಅಧಿಕಾರಿಯಾಗಿದ್ದು, ಮಂಡಳಿಯ ಕಾರ್ಯದರ್ಶಿ ಹುದ್ದೆಯನ್ನು ಇವರು ದಿ:೨೨.೫.೯೫ ರಿಂದ ೨೩.೮.೯೫ರ ಅವಧಿಗೆ ನಿರ್ವಹಿಸಿರುತ್ತಾರೆ. ಪ್ರತಿಯೊಂದು ಕಛೇರಿಯಲ್ಲಿ ಶಾಖಾ ರಕ್ಷಕ ಕಡತ ನಿರ್ವಹಿಸಿ ಎಲ್ಲಾ ಪ್ರಮುಖ ನಿಯಮಗಳು, ಆದೇಶಗಳು, ಸುತ್ತೋಲೆ ಅಧಿಕೃತ ಜ್ಞಾಪನ ಇತ್ಯಾದಿಗಳನ್ನು ನಿರ್ವಹಿಸುವುದು ವಿಷಯ ನಿರ್ವಾಹಕರ ಕರ್ತವ್ಯವಾಗಿದೆ.ಪ್ರಸ್ತುತ ಪ್ರಕರಣದ ಎಲ್ಲಾ ಮೂರು ನೇಮಕಾತಿಗಳನ್ನು ಕಡತದಲ್ಲಿ ನಿರ್ವಹಿಸಿದ್ದು, ವಿಷಯ ನಿರ್ವಹಕರಾಗಿದ್ದ ಸಾಕ್ಷಿದಾರರು ಆಪಾದಿತ ಅಧಿಕಾರಿಯವರಿಗೆ ಶಾಖಾ ರಕ್ಷ ಕಡತ ಒದಗಿಸಿ ಯಾವುದೇ ಮಾಹಿತಿ ನೀಡಿರುವುದಿಲ್ಲ. ಈ ಜಂಟಿ ಇಲಾಖಾ ವಿಚಾರಣೆಯಲ್ಲಿ ಅವರೂ ಸಹ ಆಪಾದಿತರು ಆಗಬೇಕಿದೆ. | In the previous paras the appellant argues that the charges are vague, doesn't contain the rules he has violated and contested the statement of witnesses but in this para he is evasive and blames case worker on the ground that he has not provided him the section guard file containing relevant order etc. Therefore his contention that the witness (case worker) could also have been impleaded as one of the AGO's cannot be accepted. |

| | |
|---|---|
| 4. ಆಪಾದಿತ ಅಧಿಕಾರಿಯು ತಮ್ಮ ಸ್ವಯಂ ಸಾಕ್ಷಿ ಹೇಳಿಕೆಯಲ್ಲಿ ನೇಮಕಾತಿಗೆ ಕೆಲಸದ ಒತ್ತಡ ಇದ್ದುದರಿಂದ, ಹಿಂದಿನ ಕಾರ್ಯದರ್ಶಿಯವರು ಅನುಸರಿಸಿದ ನೇಮಕಾತಿ ವಿಧಾನದಲ್ಲಿ ನೇಮಕಾತಿ ಗಳನ್ನು ಮಾಡಲಾಗಿದೆ. ಈ ನೇಮಕಾತಿಗಳನ್ನು ಪ್ರಕಟಣೆ ನೀಡಿ ಸಂದರ್ಶನದ ಮೂಲಕ, ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ತೆಗೆದುಕೊಳ್ಳಲಾಗಿದ್ದು, ಇದಕ್ಕೆ ಮಂಡಳಿಯ ಅನುಮೋದನೆ ಪಡೆಯ ಲಾಗಿದೆ. ಆಯ-ವ್ಯಯದಲ್ಲಿ ಹುದ್ದೆಗಳಿಗೆ ನೀಡಿರುವ ಅನುದಾನದಿಂದ ಇವರ ವೇತನ ಪಾವತಿ ಆಗಿರುತ್ತದೆ. ಬೆರಳಚ್ಚುಗಾರ್ತಿಯಾಗಿ ನೇಮಕ ಮಾಡಿದಲ್ಲಿ ಅವರು ಗುಮಾಸ್ತ ಹುದ್ದೆಯ ಕೆಲಸ ವನ್ನು ನಿರ್ವಹಿಸಲು ಹಿಂಜರಿಯುವ ಕಾರಣದಿಂದ ಎರಡೂ ಕೆಲಸ ನಿರ್ವಹಿಸಲು ತಕ್ಕ ಅಭ್ಯರ್ಥಿಯಾದ ಕ್ಲರ್ಕ್ ಕಂ ಟೈಪಿಸ್ಟನ್ನು ನೇಮಕ ಮಾಡಿರುವುದರಿಂದ ಈ ಅಂಶಗಳನ್ನು ಪರಿಗಣಿಸಿ ಆರೋಪಗಳು ಸಾಬೀತಾಗಿಲ್ಲವೆಂದು ನಿರ್ಣಯಿಸಲು ಕೋರಿದೆ. | The appellant has contended that he has taken action on the lines of action taken by his predecessors and the appointments have been made in view of the urgency and he has followed procedures like inter viewing, verification of certificates of the candidate etc. All these actions does not absolve him from the lapse committed by him. By this argument he has only indirectly admitted that he has done something which he ought not to have done. |
| 5.(i&ii):ದಿನಾಂಕ ೨೨.೫.೯೫ ರಿಂದ ೨೩.೮.೯೫ ರವರೆಗಿನ ಕಾರ್ಯದರ್ಶಿಯಾಗಿದ್ದ ಅವಧಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಐಟಿವೈ ೭೬ ಪಿಐಪಿ ೮೪ ದಿನಾಂಕ ೨೩.೬.೮೪ರಲ್ಲಿ ಮಂಜೂರಾಗಿದ್ದ ೧೩ ಹುದ್ದೆಗಳ ಪೈಕಿ ಖಾಲಿಯಿದ್ದ ೩ ವಿವಿಧ ವೃಂದ ಗಳ ಹುದ್ದೆಗಳಿಗೆ ನೇಮಕಾತಿ ನಿಯಮಗಳನ್ನು ಉಲ್ಲಂಘಿಸಿ ನೇಮಕ ಮಾಡಿಕೊಳ್ಳುವುದರ ಮೂಲಕ ನೇಮಕಾತಿಯಲ್ಲಿ ಯಾವುದೇ ನೇಮಕಾತಿ ನಿಯಮಗಳನ್ನು ಪಾಲಿಸದೇ, ಯಾವುದೇ ಉದ್ಯೋಗ ವಿನಿಮಯ ಕೇಂದ್ರದಿಂದಾಗಲಿ ಅಥವಾ ನೇಮಕಾತಿ ಸಮಿತಿಯನ್ನು ರಚಿಸಿ ಸಾರ್ವಜನಿಕವಾಗಿ ಅರ್ಜಿ ಗಳನ್ನು ಆಹ್ವಾನಿಸಿ ಸಂದರ್ಶನ ಗಳನ್ನು ನಡೆಸದೆ ನೇರವಾಗಿ ನೇಮಕಾತಿ ಮಾಡಿ ನಿಮ್ಮ ಅಧಿಕಾರ ವನ್ನು ದುರುಪ ಯೋಗ ಮಾಡಿಕೊಂಡಿರುವುದು ಈ ನಿಮ್ಮ ನಡತೆಯು ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿದ್ದು ನಡತೆ ನಿಯಮಗಳನ್ನು ಉಲ್ಲಂಘಿಸಿರುತ್ತೀರಿ. ನೇಮಕಾತಿ ಮಾಡಿರುವ ಹುದ್ದೆಗಳಿಗೆ ನೇಮಕಾತಿ ನಿಯಮಗಳನ್ನು ಈ ದಿನಾಂಕ ದವರೆಗೆ ಹೊರಡಿಸದೆ ಇರುವುದನ್ನು ಶಿಸ್ತು ಪ್ರಾಧಿಕಾರಿಯು ಒಪ್ಪಿಕೊಂಡಿರುತ್ತದೆ. ನೇಮಕಾತಿ ಸಮಿತಿಯನ್ನು ರಚಿಸಲು ಅಥವಾ ಉದ್ಯೋಗ ವಿನಿಮಯ ಕಛೇರಿಯಿಂದ ಪಟ್ಟಿ ಪಡೆಯಲು ಯಾವ ನಿಯಮ ನಿಗಧಿ ಪಡಿಸಿದೆ ಎಂಬ ಬಗ್ಗೆ ವಿವರ ಒದಗಿಸಿರುವುದಿಲ್ಲ. ಅರ್ಜಿಗಳ ಬಗ್ಗೆ ಪ್ರಕರಣ ಹೊರಡಿಸಿದ್ದು, ಅದನ್ನು ಮಂಡಳಿಯ ಫಲಕದಲ್ಲಿ ಪ್ರದರ್ಶಿಸಲಾಗಿತ್ತು. ಇಲಾಖಾ ವಿಚಾರಣೆ ಪ್ರಕರಣ ನಡೆದು ೮ ವರ್ಷಗಳ ನಂತರ ವಿಚಾರಣೆ ನಡೆಯುತ್ತಿರುವ ಈ ಬಗ್ಗೆ ಹೆಚ್ಚಿನ ಮಾಹಿತಿ ನೀಡಲು ಅವರಿಗೆ ಸಾಧ್ಯವಾಗಿರುವುದಿಲ್ಲ. ಆಪಾದಿತರು ತಮಗೆ ಬೇಕಾದವರನ್ನು ನೇಮಕ ಮಾಡಿಲ್ಲ.ನೇಮಕ ಗೊಂಡವರು ಅವರ ಸಂಬಂಧಿಗಳು/ಮಿತ್ರರು ಅಥವಾ ಅವರ ಪರಿಚಯದವರು ಆಗಿರುವುದಿಲ್ಲ. | The action of the appellant lacks transparency. He has failed to give wide publicity nor has he obtained the list from the employment exchange. The appellant does not have any power to have his own method in the absence of C & R Rules. Therefore he cannot take protection on small technical issues. He has further questioned as to under what rules he should have made appointments. Perhaps this question should have been raised by him before he made appointment to these posts in question. This would also imply that the appellant has made appointments knowingly that there was no recruitment Rules for the board which the officer was well aware of. |
| 6. ಖಾಲಿಯಿದ್ದ ೩ ವಿವಿಧ ವೃಂದ ಹುದ್ದೆಗಳಿಗೆ ನೇರ ನೇಮಕಾತಿ ಮಾಡಿಕೊಂಡಿದ್ದು, ಮಂಡಳಿಗೆ ಮಂಜೂರು ಆಗಿರುವ ಹುದ್ದೆಗಳಿಗೆ ಬೆರಳಚ್ಚುಗಾರರ ಹುದ್ದೆಯು ಇದ್ದು, ಈ ಹುದ್ದೆಗೆ ಕ್ಲರ್ಕ್ ಕಂ ಟೈಪಿಸ್ಟ್ ನೇಮಕಾತಿ ಮಾಡಿಕೊಂಡಿರುವಿರಿ. ಮಂಡಳಿಯಲ್ಲಿ ಕ್ಲರ್ಕ್ ಕಂ ಟೈಪಿಸ್ಟ್ ಹುದ್ದೆ ಇಲ್ಲದೆ ಮಂಜೂರಾಗಿರುವ ಟೈಪಿಸ್ಟ್ ಹುದ್ದೆಗೆ ಕ್ಲರ್ಕ್ ಕಂ ಟೈಪಿಸ್ಟ್ ಎಂದು ನೇಮಕ ಮಾಡಿಕೊಂಡಿರುವುದು ನಿಯಮ ಬಾಹಿರವಾಗಿದ್ದು, ಟೈಪಿಸ್ಟ್ ಹುದ್ದೆ ಬದಲಾಗಿ ಕ್ಲರ್ಕ್ ಕಂ ಟೈಪಿಸ್ಟ್ ಎಂದು ನೇಮಕ ಮಾಡಿಕೊಂಡಿರುವ ನಿಮ್ಮ ಕ್ರಮವು ನೇಮಕಾತಿ ನಿಯಮ ಗಳಿಗೆ ವಿರುದ್ಧವಾಗಿದೆ ಇದು ನಡತೆ | The Enquiry Officer after carefully considering the materials placed before him has opined that both the officials have transgressed their power and misused their position under the guise of resolution passed by the Temperance Board. The argument that he has not violated the rules and that he has appointed clerk cum typist instead of typist in the interest of work are all a ploy to cover up his lapse. |

| | |
|---|---|
| ನಿಯಮಗಳಿಗೆ ವಿರುದ್ಧವಾಗಿದೆ. ೧೯೮೪ರಲ್ಲಿ ಬೆರಳಚ್ಚುಗಾರರ ಹುದ್ದೆಯು ಮಂಜೂರಾಗಿದ್ದರೂ ೧೯೮೫ನೇ ಸಾಲಿನವರೆಗೆ ಅದನ್ನು ಭರ್ತಿ ಮಾಡಿರುವುದಿಲ್ಲ. ಹುದ್ದೆಯನ್ನು ಭರ್ತಿ ಮಾಡುವಾಗ ಬೆರಳಚ್ಚುಗಾರರನ್ನು ಭರ್ತಿ ಮಾಡಿಕೊಂಡರೆ ಅವರಿಗೆ ಸಾಕಷ್ಟು ಕೆಲಸವಿಲ್ಲದಿದ್ದಾಗ ಅವರಿಂದ ಗುಮಾಸ್ತರ ಕೆಲಸವನ್ನು ನಿರ್ವಹಿಸಲು ಅನುವಾಗುವಂತೆ ಕ್ಲರ್ಕ್ ಕಂ ಟೈಪಿಸ್ಟ್ ಹುದ್ದೆಗೆ ನೇಮಕಾತಿ ಮಾಡಿಕೊಳ್ಳಲಾಯಿತು. ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸುವಾಗ ಬೆರಳಚ್ಚುಗಾರರ ಹುದ್ದೆಯ ಬದಲು ಕ್ಲರ್ಕ್ ಕಂ ಟೈಪಿಸ್ಟ್ ಹುದ್ದೆಯನ್ನು ಅಳವಡಿಸಬಹುದಾಗಿದೆ. | |
| 7. ನಿಯಮಬಾಹಿರ ನೇಮಕ ಮಾಡಿಕೊಂಡಿರುವ ಹುದ್ದೆ ಗಳಲ್ಲಿ ಪ್ರಾಜೆಕ್ಟ್ ಆಪರೇಟರ್ ಹುದ್ದೆಯು ಒಂದಾಗಿದ್ದು, ಅದಕ್ಕೆ ನಿಗದಿ ಪಡಿಸಿದ ವಿದ್ಯಾರ್ಹತೆಯನ್ನು ಹೊಂದಿರುವುದು ಕಂಡು ಬಂದಿರುವುದಿಲ್ಲ. ನೀವು ಯಾವುದೇ ವಿದ್ಯಾರ್ಹತೆ, ಮಾನದಂಡ ಗಳನ್ನು ಪರಿಗಣಿಸದೆ ನೇಮಕಾತಿ ಮಾಡಿಕೊಂಡಿರುವುದು ಕಂಡು ಬಂದಿದೆ ಮತ್ತು ದಾಖಲೆಗಳಿಂದ ದೃಢ ಪಟ್ಟಿದೆ. ನೇಮಕಾತಿ ನಿಯಮಗಳನ್ನು ಗಾಳಿಗೆ ತೂರಿ ಅನರ್ಹ ಅಭ್ಯರ್ಥಿಯನ್ನು ನೇಮಕ ಮಾಡಿಕೊಂಡು ನಡತೆ ನಿಯಮಗಳನ್ನು ಉಲ್ಲಂಘಿಸಿದ್ದೀರಿ.<br>ಪ್ರಾಜೆಕ್ಟ್ ಆಪರೇಟರ್ ಹುದ್ದೆಯೂ ಸೇರಿದಂತೆ ಯಾವುದೇ ಹುದ್ದೆಗೆ ವೃಂದ ಮತ್ತು ನೇಮಕಾತಿ ನಿಯಮ ಗಳನ್ನು ಸರ್ಕಾರ ಹೊರಡಿಸದೆ ಇರುವುದರಿಂದ ನೇಮಕಾತಿ ಹೊಂದಿದ ಅಭ್ಯರ್ಥಿಗೆ ವಿದ್ಯಾರ್ಹತೆ ಇಲ್ಲವೆಂದು ಪರಿಗಣಿಸಲು ಅವಕಾಶವಿಲ್ಲ. ನೇಮಕಾತಿ ಹೊಂದಿರುವ ಶ್ರೀ ಎಂ.ಬಿ. ಹುರಕಡ್ಲಿ ಅವರು ಪ್ರಾಜೆಕ್ಟ್ ಆಪರೇಟರ್ ಹುದ್ದೆಯನ್ನು ನಿರ್ವಹಿಸಲು ಸಕ್ಷಮರೇ ಎಂಬುದನ್ನು ಖಚಿತ ಪಡಿಸಿಕೊಂಡು ನೇಮಕಾತಿ ಮಾಡಲಾಗಿರುತ್ತದೆ. | The appellant argues that the candidates appointed to the post of projector operator can be given suitable training if necessary and that the candidate is capable of handling that post. Therefore it is clear that the candidate has no recognized certificate to his credit which the appellant has ignored and thus committed mis- conduct. Hence his argument is not valid. |
| 8. ಯಾವುದೇ ನೇಮಕಾತಿ ನಿಯಮಗಳನ್ನು ಪಾಲಿಸದೆ ಮತ್ತು ಮೀಸಲಾತಿ ನಿಯಮಗಳನ್ನು ಪಾಲಿಸದೆ ಹುದ್ದೆಗೆ ವರ್ಗೀಕರಣ, ಮೀಸಲಾತಿ ಅನುಸರಿಸದೆ ದುರುದ್ದೇಶ ಪೂರಿತವಾಗಿ ನಿಮಗಿಷ್ಟ ಬಂದವರಿಗೆ ಅನುಕೂಲ ಮಾಡಿಕೊಡುವ ಒಂದೇ ಉದ್ದೇಶದಿಂದ ಅರ್ಹ ಹುದ್ದೆಗಳಿಗೆ ಅರ್ಹ ಯೋಗ್ಯತ ಪ್ರಮಾಣ ಪತ್ರಗಳನ್ನು ಪಡೆದು ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳದೆ ನಿಯಮ ಬಾಹಿರವಾಗಿ ಸ್ವ ಲಾಭ ಮತ್ತು ಸ್ವಜನ ಪಕ್ಷಪಾತ ಮಾಡಿದ್ದೀರಿ. ಇದು ಒಂದನೇ ಆರೋಪದ ಪುನರಾವರ್ತನೆ ಯಾಗಿದ್ದು, ನೇಮಕಾತಿ ಮಾಡಿದ ಅಭ್ಯರ್ಥಿಗಳು ರೋಸ್ಟರ್ ಅನ್ವಯ ಇದ್ದು ಯಾವ ರೋಸ್ಟರ್ ಬಿಂದುವನ್ನು ಉಲ್ಲಂಘಿಸಲಾಗಿದೆ ಎಂಬುದನ್ನು ಆರೋಪ ಪಟ್ಟಿಯಲ್ಲಿ ಉಲ್ಲೇಖಿಸಿರುವುದಿಲ್ಲ. ಸಾರ್ವಜನಿಕರಿಂದ ಅರ್ಜಿಗಳನ್ನು ಆಹ್ವಾನಿಸಿ ಅರ್ಹ ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ನೇಮಕಾತಿ ಮಾಡಿಕೊಳ್ಳುವುದು ನಿಯಮವಾಗಿದೆ ಎಂದು ನಮೂದಿಸಲಾಗಿದೆ. ಆದ್ದರಿಂದ ನಾಲ್ಕನೇ ಆರೋಪ ಸಾಬೀತಾಗಿಲ್ಲವೆಂದು ಪರಿಗಣಿಸಲು ಕೋರಿದೆ. | Here again the appellant has simply arguing on technical grounds that suitable appointments have been made in the absence of C & R Rules. As the Head of the administration he should have exercised greater care in the matter of recruitment policy, roaster system etc. His vague argument that roaster point which he is alleged to have violated is not pointed out cannot be accepted since no such procedure was followed by him. |
| 9. ಐದನೇ ಆರೋಪವು ಪ್ರತ್ಯೇಕ ಆರೋಪವಾಗಿರದೆ ಒಂದನೇ ಆರೋಪದ ಪುನರಾವರ್ತನೆ ಆಗಿದೆ. ಆಪಾದಿತ ಅಧಿಕಾರಿಯು ದಿನಾಂಕ ೨೩.೮.೮೫ರವರೆಗೆ ಮಾತ್ರ ಮಂಡಳಿಯ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸಿದ್ದು, ಆಪಾದಿತ ಅಧಿಕಾರಿಯು ಮಾಡಿರುವ ನೇಮಕಾತಿ ಗಳು ನಿಯಮಬಾಹಿರವಾಗಿದ್ದಲ್ಲಿ ನೇಮಕಗೊಂಡ ಸಿಬ್ಬಂದಿಯ ಸೇವೆಯನ್ನು ಅಂತ್ಯಗೊಳಿಸಬಹುದಾಗಿತ್ತು.ಸುಮಾರು ೮-೯ ವರ್ಷಗಳವರೆಗೆ ವೇತನ ಬಡ್ತಿಯನ್ನು ಪಾವತಿಸಿರುವುದಿಲ್ಲ. ನೇಮಕಾತಿಯು ಸಕ್ರಮವಾಗಿವೆ ಎಂಬುದು ಸಾಬೀತಾಗಿದೆ. | According to Karnataka Civil Service (Classification Control and Appeal) Rules any misconduct by the official is subject to an enquiry until he retires irrespective of age of incidence. Just because the candidates have been continued in service and paid wages all the years cannot absolve him from his misdeed. |

| | |
|---|---|
| 10. ಮೇಲ್ಕಂಡ ಎಲ್ಲಾ ಆರೋಪಗಳ ಬಗ್ಗೆ. | As in previous paras. |
| 11. ಮಂಡನಾಧಿಕಾರಿಯವರು ತಮ್ಮ ವಾದದ ಮೂರನೇ ಕಂಡಿಕೆಯಲ್ಲಿ ಮಂಡಳಿಯಲ್ಲಿ ಈ ಹಿಂದೆ ನೇಮಕಾತಿ ಗೊಂಡಿರುವ ನಾಲ್ಕು ಸಿಬ್ಬಂದಿಯ ನೇಮಕಾತಿಯನ್ನು ಸಮರ್ಥಿಸಿಕೊಂಡಿದ್ದಾರೆ. ಆದರೆ ಇವರ ನೇಮಕಾತಿಯನ್ನು ಯಾವ ನಿಯಮಗಳಡಿಯಲ್ಲಿ ಮಾಡಿದೆ? ಅರ್ಜಿ ಆಹ್ವಾನಿಸಲಾಗಿದೆಯೇ? ರೋಸ್ಟರ್ ಪದ್ಧತಿ ಮಾಡಲಾಗಿದೆಯೇ? ಎಂಬ ಬಗ್ಗೆ ತಿಳಿಸಿಲ್ಲ. ಅರ್ಜಿಗಳನ್ನು ಆಹ್ವಾನಿಸಿರುವ ಬಗ್ಗೆ ನಮೂದು ಇಲ್ಲವೆಂದು ತಿಳಿಸಿದ್ದಾರೆ. ಐದನೇ ಕಂಡಿಕೆಯಲ್ಲಿ ನೇಮಕಾತಿಗಳಿಗೆ ಸರ್ಕಾರದ ಅನುಮೋದನೆ ಪಡೆಯಬೇಕಿತ್ತು ಎಂದು ನಮೂದಿಸಿರುತ್ತಾರೆ. ಮಂಡನಾಧಿಕಾರಿಯವರು ತಾವು ಮಾಡಿರುವ ಕಾರ್ಯ ಲೋಪವನ್ನು ಮುಚ್ಚಿ ಹಾಕಲು ಪ್ರಯತ್ನಿಸಿರುವವರು ಎಂದು ನಮೂದಿಸಿದ್ದಾರೆ. ಮಂಡಳಿಯ ಆದೇಶವನ್ನು ಇಷ್ಟು ಲಘುವಾಗಿ ಪರಿಗಣಿಸಿರುವುದು ಸರಿಯಲ್ಲ. ಮಂಡಳಿಯು ನೇಮಕಾತಿ ನಿಯಮ ಗಳನ್ನು ಅನುಮೋದಿಸಿದೆ. ಆಯ ವ್ಯಯ ಹಂಚಿಕೆಯಲ್ಲಿ ವೇತನ ಪಾವತಿ ಮಾಡಬಾರದು ಎಂದು ಎಲ್ಲೂ ತಿಳಿಸಿರುವುದಿಲ್ಲ. ಕಂಡಿಕೆ-೧೧ರಲ್ಲಿ ರೋಸ್ಟರನ್ನು ಪಾಲಿಸಿಲ್ಲವೆಂದು ತಿಳಿಸಲಾಗಿದೆ. ಲಿಖಿತ ವಾದಗಳೊಂದಿಗೆ ದಸ್ತಾವೇಜುಗಳನ್ನು ಒದಗಿಸಿರುವುದು ನಿಯಮಬಾಹಿರವಾಗಿದೆ. | All these contention have been considered by Enquiry Officer. The Temperance Board is an institution under the Government. The argument of the applicant that the Board has approved these appointments and therefore it is not correct to treat it lightly cannot be accepted. Similarly his argument on roaster system that many SC/ST and backward classes candidates have been appointed which has not been considered in the enquiry is not correct. Appointment of candidates on roaster basis is different than that of merely selecting such candidates on the basis of their caste. Therefore the appellant has totally failed to understand the crux of the issues. |
| 12.A ಉಲ್ಲೇಖಿತ ಪತ್ರದೊಂದಿಗೆ ಒದಗಿಸಿರುವ ವಿಚಾರಣಾ ವರದಿಯಲ್ಲಿ ೧೨ನೇ ಕಂಡಿಕೆ ಹಾಗೂ ಅದರ ನಮೂದು ಗಳಿರುವುದಿಲ್ಲ. ಪೂರ್ಣ ಪ್ರಮಾಣದ ವಿಚಾರಣಾ ವರದಿಯನ್ನು ಒದಗಿಸಿದಲ್ಲಿ ಪ್ರತಿ ರಕ್ಷಣಾ ಹೇಳಿಕೆಗಳನ್ನು ೧೫ ದಿನಗಳೊಳಗೆ ಒದಗಿಸಲಾಗುವುದು. | A complete copy of Enquiry Report was provided to him. His argument that some contents in the copy of Report is missing is not correct. In his reply vide dated 16.10.2004 he has given para wise explanation requesting to exonerate him. |
| 12.B&C ವಿಚಾರಣಾಧಿಕಾರಿಯವರು ಆಪಾದಿತ ಅಧಿಕಾರಿ ಯವರು ಮಂಡಿಸಿರುವ ವಾದಗಳ ಅಂಶಗಳನ್ನು ಪರಿಗಣಿಸಿರುವುದಿಲ್ಲ. ವಿಚಾರಣೆಯನ್ನು ೮ ವರ್ಷಗಳ ನಂತರ ವಿಳಂಬವಾಗಿ ನಡೆಸಿರುವುದರಿಂದ ತಮ್ಮನ್ನು ಸಮರ್ಥಿಸಿ ಕೊಳ್ಳಲು ಆಪಾದಿತ ಅಧಿಕಾರಿಗಳಿಗೆ ಕಷ್ಟವಾಗಿದೆ ಎಂಬ ವಾದಗಳನ್ನು ಮಂಡಿಸಲಾಗಿರುತ್ತದೆ.೮ ವರ್ಷಗಳ ಅವಧಿಯ ನಂತರ ಅವರು ನಿರ್ವಹಿಸಿದ ಕಡತಗಳೊಂದಿಗೆ ಇತರೆ ಕಡತಗಳು/ನಿರ್ಣಯಗಳು ಲಭ್ಯವಿದ್ದಲ್ಲಿ ಅವುಗಳನ್ನು ಪಡೆಯುವ ಅವಕಾಶ ಆಪಾದಿತ ಅಧಿಕಾರಿಗಳಿಗೆ ಇರುವುದಿಲ್ಲ. | The Enquiry Officer has followed the procedure laid down in sub rule 23 of Rule 11 of Karnataka Civil Service (Classification, Control and Appeal) Rules 1957. The appellant argues that he had no opportunity to obtain certain documents from the Board which he vacated 8 years ago has been considered and rejected by the Enquiry Officer. |
| 12.D&E ನೇಮಕಾತಿ ಹೊಂದಿರುವ ಅಭ್ಯರ್ಥಿಗಳು ಆಪಾದಿತ ಅಧಿಕಾರಿಯ ಸಂಬಂಧಿಕರಲ್ಲ ಎಂಬ ಬಗ್ಗೆ ಲಿಖಿತ ವಾದಗಳಲ್ಲಿ ನಮೂದಿಸಲಾಗಿದ್ದು, ವಿಚಾರಣಾ ವರದಿಯಲ್ಲಿ ಹುದ್ದೆಗಳ ಬಗ್ಗೆ ಜಾಹಿರಾತನ್ನು ಮಂಡಳಿಯ ಪ್ರಕಟಣ ಫಲಕದಲ್ಲಿ ಪ್ರಕಟಿಸಿರುವುದನ್ನು ಸ್ವತ: ಸಾಕ್ಷಿ ಹೇಳುವುದರ ಮುಖಾಂತರ ಸಾಬೀತು ಪಡಿಸಲಾಗಿತ್ತು. ನೇಮಕಾತಿಗೆ ಮಂಡಳಿಯು ಅನುಮೋದನೆ ನೀಡಿರುವುದರಿಂದ ನೇಮಕಾತಿಗಳು ಕಾನೂನು ಬಾಹಿರವಾಗುವುದಿಲ್ಲ ಎಂಬ ವಾದವನ್ನು ಮಂಡಿಸಲಾಗಿದೆ. ಸರ್ಕಾರವು ಮಂಡಳಿಯ ನಿರ್ಣಯಗಳನ್ನು ಕಾನೂನು ಬಾಹಿರವೆಂದು ರದ್ದು ಪಡಿಸದೇ ಇರುವುದರಿಂದ ಸದರಿ ನಿರ್ಣಯಗಳು ನಿಯಮಾನುಸಾರ ಇರುತ್ತದೆ. | This has been considered by the Enquiry Officer and rejected. As the Secretary of the Board, the appellant could have advised the Board on the correct policy instead of arguing that the Board has approved some resolutions etc. |
| 13. ನಿಯಮಗಳನ್ನು ಇದೇ ಅಧಿಕಾರಿಗಳು ಮಂಡಳಿಯ ಅಧ್ಯಕ್ಷರಿಗೆ ತಿಳಿಸಿ ಸಲಹೆ ನೀಡಿಲ್ಲವೆಂಬ ಕಾರಣದಿಂದ ದಂಡನೆಯನ್ನು ವಿಧಿಸಿದೆ. ದಂಡನಾ ಆದೇಶದಲ್ಲಿ ಪ್ರಸ್ತುತ ಪ್ರಕರಣದಲ್ಲಿ ಯಾವುದೇ ಆರ್ಥಿಕ ನಷ್ಟವುಂಟಾಗಿಲ್ಲವೆಂದು ಒಪ್ಪಿಕೊಳ್ಳಲಾಗಿದೆ. ನೇಮಕಾತಿ ಮಾಡಿರುವ ಕಡತದಲ್ಲಿ ಇರುವ ವಿಷಯಗಳನ್ನು ಮಂಡಳಿಯ ಗಮನಕ್ಕೆ ತಂದು ಮಂಡಳಿಯ ಅನುಮೋದನೆ ಪಡೆಯಲಾಗಿದೆ. ದಂಡನಾ ಆದೇಶದಲ್ಲಿ ಈ ಅಂಶವನ್ನು ಪರಿಗಣಿಸಿರುವುದಿಲ್ಲ. | As in para 12, further the Enquiry Officer has correctly pointed out that a wrong done previously cannot be made a precedent and by placing such a bad precedent before the Board is again his misconduct and negligence. |

ಮೇಲ್ಕಂಡ ವಾಸ್ತವಾಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ ೬೮ ಎಸ್‌ಇಎನ್ ೦೫ ಬೆಂಗಳೂರು ದಿನಾಂಕ ೨೭ನೇ ಜುಲೈ ೨೦೦೫.**

I have considered the appeal petition submitted under rule 18 of KCS (CCA) Rules, 1957 by Sri. V.V.Puned, KAS, Executive Officer, Taluk Panchayat, Aurad, Bidar District against the orders of Government as Disciplinary Authority imposing upon him the penalty of withholding of two increments with cumulative effect vide G.O. No. DPAR 131 SEN 2002, dated 7.3.2005. I have considered the appeal in the light of the contentions made in the appeal petition and the connected inquiry records and the appeal records. From the facts as revealed after perusing the records, I do not find that the appellant has been able to make any valid case to justify his contention. I find that the Government itself has taken a rather relaxed view of the negligent action of an officer who belongs to a senior cadre like KAS and does not deserve any further consideration. Any lenient view of negligent conduct of a senior officer only goes to give rise to more irresponsible and greater negligent behaviour among officers in general leading to criticism of Government itself. I, therefore, dismiss the appeal and uphold the orders of Government as Disciplinary Authority.

**T.N. CHATURVEDI**
Governor of Karnataka.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-೩)

ಪಿ.ಆರ್.1089

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಜೆ. ಬಿ. ಕುಮಾರಸ್ವಾಮಿ, ಹಿಂದಿನ ಸಹಾಯಕ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಜಿಲ್ಲೆ, ಇವರ ವಿರುದ್ಧ ಶಿಸ್ತುಕ್ರಮ ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1. ಕೈಮಗ್ಗ ಮತ್ತು ಜವಳಿ ಇಲಾಖೆ ಪತ್ರಸಂಖ್ಯೆ: ಕೈಜಇ: ಆಡಳಿತ: ಸಿಬ್ಬಂದಿ:ಸಿ-1:37:ವಿಚಾರಣೆ: 2001-02, ದಿನಾಂಕ: 06.01.2002, ಮತ್ತು 10.09.2001.
2. ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ 230 ಕೈಸೇವಿ 2001, ದಿನಾಂಕ: 15.06.2002.
3. ಸರ್ಕಾರದ ಪತ್ರ ಸಂಖ್ಯೆ: ವಾಕೈ 230 ಕೈಸೇವಿ 2001, ದಿನಾಂಕ: 12.07.2002, ಕೈಮಗ್ಗ ಮತ್ತು ಜವಳಿ ಇಲಾಖೆ ನಿರ್ದೇಶಕರಿಗೆ.
4. ಜವಳಿ ಅಭಿವೃದ್ಧಿ ಆಯುಕ್ತರ ಪತ್ರಗಳ ಸಂಖ್ಯೆ: ಕೈಜಇ: ಆಡಳಿತ:ಸಿಬ್ಬಂದಿ:ಸಿ-1:ಜೆಬಿಕು:ಸನಿ:ಗೈರು:37, 2000-01, ದಿನಾಂಕ: 19.10.2002, 30.11.2002, 26.03.2003, 24.09.2003. ಮತ್ತು 22.01.2004.
5. ಶ್ರೀ ಜೆ. ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು ರವರ ಮನೆ ವಿಳಾಸಕ್ಕೆ ನೋಟೀಸ್ ಕಳುಹಿಸಿದ ದಿನಾಂಕ: 15.12.2002ರ ಪತ್ರ.
6. ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ರವರ ಪತ್ರ ಸಂಖ್ಯೆ: ಜಿಪಂ ಚಿ:ಆ-1:ಸಿಸಿಎ:36: 2000-01, ದಿನಾಂಕ: 22.01.2003, ಮತ್ತು ದಿನಾಂಕ: 19.06.2004.
7. ಕಾರಣ ಕೇಳುವ ನೋಟೀಸ್ ದಿನಾಂಕ: 07.01.2005 ಮತ್ತು ಸ್ವೀಕೃತಿ ಪತ್ರ ದಿನಾಂಕ: 01.03.2005.
8. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ರವರ ಪತ್ರ ಸಂಖ್ಯೆ: ಜಿಪಂ: ಆ-1/ ಸಿಸಿಎ/12, 2000-01, ದಿನಾಂಕ: 24.05.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಜವಳಿ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ರವರು ಪ್ರಸ್ತಾವನೆಯನ್ನು ಸಲ್ಲಿಸಿ ಶ್ರೀ ಜೆ. ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಇವರು ನಿಯೋಜನೆ ಮೇಲೆ ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ಇಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ದಿನಾಂಕ: 18.03.2000 ರಿಂದ ಕಛೇರಿಗೆ ಅನಧಿಕೃತ ಗೈರು ಹಾಜರಾಗಿದ್ದು, ಸರ್ಕಾರಿ ಕೆಲಸಕ್ಕೆ ಅಡಚಣೆ ಉಂಟುಮಾಡಿರುತ್ತಾರೆ ಹಾಗೂ ಗೈರು ಹಾಜರಾದಾಗ ಅವರ ವಶದಲ್ಲಿದ್ದ ಸರ್ಕಾರದ ಹಣ ರೂ. 35,000-00 ಗಳನ್ನು ತೆಗೆದುಕೊಂಡು ಹೋಗಿರುತ್ತಾರೆ ಹಾಗೂ ಈ ಮೊತ್ತದ ಬಗ್ಗೆ ಓಚರುಗಳನ್ನು ಒದಗಿಸಿರುವುದಿಲ್ಲವೆಂದು ವರದಿ ಮಾಡುತ್ತಾ, ಈ ಆರೋಪಗಳಿಗೆ ಸಂಬಂಧಿಸಿದಂತೆ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಅದರಂತೆ, ಶ್ರೀ ಜೆ. ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು ನಿಯಮ 11ರಡಿ ಇಲಾಖಾ ವಿಚಾರಣೆಯನ್ನು ನಡೆಸಲು ಉದ್ದೇಶಿಸಿ, ಇವರಿಗೆ ಕಾರಣ ಕೇಳುವ ನೋಟೀಸನ್ನು ಆರೋಪ (ಅನುಬಂಧ-1) ರಿಂದ (iv) ಪಟ್ಟಿಯೊಂದಿಗೆ ದಿನಾಂಕ: 27.01.2005 ರಂದು ಜಾರಿ ಮಾಡಲಾಯಿತು.

ಆಪಾದಿತ ಅಧಿಕಾರಿಯು ಈ ಕಾರಣ ಕೇಳುವ ನೋಟೀಸಿಗೆ ನಿಗದಿತ ಸಮಯ ಮೀರಿದ್ದಾಗ್ಯೂ ಈವರೆವಿಗೆ ತಮ್ಮ ಲಿಖಿತ ಉತ್ತರವನ್ನು ಸರ್ಕಾರಕ್ಕೆ ನೀಡಿರುವುದಿಲ್ಲ. ಆದಕಾರಣ ಆಪಾದಿತ ಅಧಿಕಾರಿಯ ಮೇಲೆ ಹೊರಿಸಿರುವ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು, ಮುಂದಿನ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 230 ಕೈಸೇವಿ 2001, ಬೆಂಗಳೂರು, ದಿನಾಂಕ: 19ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ ಶ್ರೀ ಜೆ. ಬಿ. ಕುಮಾರಸ್ವಾಮಿ, ಹಾಲಿ ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ ಜಿಲ್ಲೆ, ಇವರು ಈ ಹಿಂದೆ ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಜಿಲ್ಲೆ, ಇಲ್ಲಿ ಸಹಾಯಕ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 18.03.2000 ರಿಂದ ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ ಹಾಗೂ ಅವರ ವಶದಲ್ಲಿದ್ದ ಕಛೇರಿಯ ಹಣ ರೂ. 35,000.00 ಗಳನ್ನು ತೆಗೆದುಕೊಂಡು ಹೋಗಿರುತ್ತಾರೆ. ಇದಕ್ಕೆ ಓಚರುಗಳನ್ನು ಸಹ ಒದಗಿಸಿರುವುದಿಲ್ಲ. ಇವರ ಈ ವರ್ತನೆಯು ಕೆ.ಸಿ.ಎಸ್. (ನಡತೆ) ನಿಯಮಾವಳಿಯನ್ನು ಉಲ್ಲಂಘಿಸಿದಂತಾಗಿ, ಸರ್ಕಾರಿ ನೌಕರರಿಗೆ ಸಲ್ಲದ ಕೃತ್ಯವನ್ನು ಎಸಗಿದಂತಾಗುತ್ತದೆ. ಆದ್ದರಿಂದ, ಈ ಬಗ್ಗೆ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957ರ ನಿಯಮ 11ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಇದೇ ನಿಯಮದ ಉಪ ನಿಯಮ 5ನ್ನು ಓದಿಕೊಂಡಂತೆ ಅದೇ ನಿಯಮದ ಉಪ ನಿಯಮ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸಲು ಶ್ರೀ ಬಿ. ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, 239/1 "ನಾಗಶ್ರೀ", 4ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957ರ ನಿಯಮ 11 (5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಪುಟ್ಟಸ್ವಾಮಿ, ವ್ಯವಸ್ಥಾಪಕರು, ಜಿಲ್ಲಾ ಪಂಚಾಯತ್ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಸೂಚಿಸಲಾಗಿದೆ.

ಈ ಪ್ರಕರಣದ ವಿಚಾರಣೆಗಾಗಿ ರೂ. 5,000.00 (ರೂಪಾಯಿ ಐದು ಸಾವಿರಗಳು ಮಾತ್ರ) ಮತ್ತು ವಾಹನ ಭತ್ಯೆ ರೂ.1,000.00 (ರೂಪಾಯಿ ಒಂದು ಸಾವಿರಗಳು ಮಾತ್ರ) ಸಂಚಿತ ಸಂಭಾವನೆಗಳನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್.1048 ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಸಿ. ಕೃಷ್ಣಮೂರ್ತಿ, ಅಧೀನ ಕಾರ್ಯದರ್ಶಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 05 ದಿನಾಂಕ: 15.6.2005.

2. ಶ್ರೀ ಸಿ. ಕೃಷ್ಣಮೂರ್ತಿ ಅವರ ದಿನಾಂಕ: 1.7.05ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಸಿ. ಕೃಷ್ಣಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ರಾಜಕೀಯ ವಿಶ್ರಾಂತಿ ವೇತನ) ಇವರು ಕಂದಾಯ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯದೇ, ಸಹಮತಿಯನ್ನು ಪಡೆಯಲಾಗಿದೆಯೆಂದು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ: 15 ಎಂಆರ್‌ಆರ್ 97 ದಿನಾಂಕ: 17.7.2000ನ್ನು ಹೊರಡಿಸಿ ಭೂ ದಾಖಲೆಗಳ ನಿರ್ದೇಶಕರಿಗೆ ರೂ.114.59 ಲಕ್ಷ ಹಣವನ್ನು ಬಿಡುಗಡೆಗೊಳಿಸಿರುವ ದುರ್ನಡತೆಯ ಆರೋಪಗಳಿಗಾಗಿ ಶ್ರೀ ಕೃಷ್ಣಮೂರ್ತಿರವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ:15.6.2005ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 1.7.2005ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 2005 ಬೆಂಗಳೂರು ದಿನಾಂಕ: 8ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರ ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.4.1998 ರಂತೆ ರೂ.5,000/- ಗೌರವ ಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ 1,000/- ರೂಪಾಯಿಗಳ ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಗುರುಸಿದ್ದಯ್ಯ, ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆರವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ**

ಪಿ.ಆರ್.1115 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಯಳನಡು ಜಗದ್ಗುರು ವಿದ್ಯಾ ಸಂಸ್ಥೆ (ರಿ), ಅರಸಿಕೆರೆ, ಹಾಸನ ಜಿಲ್ಲೆ, ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಿ ಹೊರಡಿಸಲಾದ ಆದೇಶವನ್ನು ತಡೆಹಿಡಿಯುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುನೋಸೋ 2003, ಬೆಂಗಳೂರು ದಿನಾಂಕ: 8ನೇ ಆಗಸ್ಟ್ 2005**

ಶ್ರೀ ಯಳನಡು ಜಗದ್ಗುರು ವಿದ್ಯಾ ಸಂಸ್ಥೆ (ರಿ), ಅರಸೀಕೆರೆ, ಹಾಸನ ಜಿಲ್ಲೆ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ(1)(ಸಿ) ಪ್ರಕಾರ ಸರ್ಕಾರದ ಸಮ ಸಂಖ್ಯೆ ದಿನಾಂಕ: 26.7.2005 ರ ಆದೇಶದಲ್ಲಿ ತಹಶೀಲ್ದಾರ್, ಅರಸೀಕೆರೆ ತಾಲ್ಲೂಕು ಇವರನ್ನು ಆಡಳಿತಾಧಿಕಾರಿಯಾಗಿ ನೇಮಿಸಿರುವ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪಿ. ಮಂಜುನಾಥ್**

ಪಿ.ಆರ್.1111 ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ :** ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕು ಶ್ರೀ ಭದ್ರಾಂಬಿಕೇಶ್ವರ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ. ಏಕರೂಪಶಾಸನ: ಸಿಆರ್:47:2003-04 ದಿನಾಂಕ: 31.07.2004 ಮತ್ತು 18.10.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ:(2)ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕು ಶ್ರೀ ಭದ್ರಾಂಬಿಕೇಶ್ವರ ದೇವಸ್ಥಾನ ಒಂದು ಅಧಿಸೂಚಿತ ಸಂಸ್ಥೆಯಾಗಿದ್ದು, ಚಿಕ್ಕರಮನೆ ವಂಶಸ್ಥರಿಗೆ ಸೇರಿರುವುದರಿಂದ ಮತ್ತು ಬಾಂಬೆ ಪಬ್ಲಿಕ್ ಟ್ರಸ್ಟ್ ಕಾಯಿದೆಯಡಿ ನೋಂದಾಯಿಸಲ್ಪಟ್ಟಿರುವುದು ದಾಖಲೆಗಳಿಂದ ಕಂಡು ಬರುವುದೆಂದು ಸದರಿ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧ್ಯಾಯ 1ರ ಪ್ರಾರಂಭಿಕ 4 (2)ರಂತೆ ಕಾಯ್ದೆ ವ್ಯಾಪ್ತಿಯಿಂದ ವಿನಾಯಿತಿಗೊಳಿಸಿ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಲು ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 104 ಮುಆಬಿ 2004, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪನಿಯಮ 4(2)ರ ಪ್ರಕಾರ ಒಂದು ಹಿಂದೂ ಕುಟುಂಬವು ಸ್ಥಾಪಿಸಿ, ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರವು ಹೊರಡಿಸಿರುವ ದಿನಾಂಕ: 30.04.2003ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕು, ಮರ್ಕಿಮುನಿ ಗ್ರಾಮದ ಶ್ರೀ ಭದ್ರಾಂಬಿಕೇಶ್ವರ ದೇವಸ್ಥಾನ ಕ್ರಮ ಸಂಖ್ಯೆ:34 ಪುಟ ಸಂಖ್ಯೆ: 741ರಲ್ಲಿರುವ ಸದರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್.1112 ಪೀಠಾಧಿಕಾರಿ, ಕಂದಾಯ ಇಲಾಖೆ, (ಮುಜರಾಯಿ).

## ಶಿಕ್ಷಣ ಸಚಿವಾಲಯ

**ವಿಷಯ :** ಗಡಿನಾಡು ಅಧ್ಯಯನ ವರದಿ ಶಿಫಾರಸ್ಸು-ಗಡಿಶಾಲೆಗಳ ಮೇಲ್ವಿಚಾರಣೆಗಾಗಿ ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ ಆಯುಕ್ತಾಲಯದ ನಿರ್ದೇಶಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಗಡಿನಾಡು ಅಧ್ಯಯನ ಆಯೋಗದ ವರದಿ ಅನುಷ್ಠಾನ ಸಮಿತಿಯ ದಿನಾಂಕ: 9.3.2005 ರಂದು ನಡೆಸಿದ ಸಭೆಯ ನಿರ್ಣಯ.

**ಪ್ರಸ್ತಾವನೆ:**

ಗಡಿನಾಡು ಅಧ್ಯಯನ ಆಯೋಗದ ವರದಿಯ ಅನುಷ್ಠಾನ ಸಮಿತಿಯು ದಿನಾಂಕ: 9.3.2005 ರಂದು ಸಭೆ ಸೇರಿ ಇತರ ನಿರ್ಣಯಗಳೊಡನೆ ಆಯೋಗದ ವರದಿಯಲ್ಲಿನ 2ನೇ ಶಿಫಾರಸ್ಸು ಕುರಿತು ಚರ್ಚಿಸಿ ಧಾರವಾಡ ಶಿಕ್ಷಣ ನಿರ್ದೇಶನಾಲಯದ ನಿರ್ದೇಶಕರನ್ನು ಗಡಿ ಶಾಲೆಗಳ ಮೇಲ್ವಿಚಾರಣೆಗಾಗಿ ನೇಮಕ ಮಾಡಬೇಕೆಂಬ ನಿರ್ಣಯವನ್ನು ಅಂಗೀಕರಿಸಿದೆ. ಈ ನಿರ್ಣಯದಂತೆ ನೇಮಕ ಮಾಡಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 227 ಯೋಯೋಕ 2004 ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2005**

ಗಡಿನಾಡು ಅಧ್ಯಯನ ಆಯೋಗದ ವರದಿಯಲ್ಲಿನ 2ನೇ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ ಆಯುಕ್ತಾಲಯದ ನಿರ್ದೇಶಕರನ್ನು ಗಡಿಶಾಲೆಗಳ ಮೇಲ್ವಿಚಾರಕರನ್ನಾಗಿ ಈ ಮೂಲಕ ನೇಮಿಸುತ್ತದೆ.

- ನಾಡಿನ ಎಲ್ಲ ಜನರನ್ನು ಅಕ್ಷರಸ್ಥರನ್ನಾಗಿಸಲು ಸರ್ಕಾರವು ರೂಪಿಸಿರುವ ಕಾರ್ಯಕ್ರಮಗಳನ್ನು ರಾಜ್ಯ ಗಡಿಭಾಗಗಳಲ್ಲಿ ತೀವ್ರತೆ ಮತ್ತು ಕ್ರಮ ಬದ್ಧತೆಯಿಂದ ಉತ್ತರಿಸಲು ಅವರು ಈ ಮುಂದಿನ ಕ್ರಮಗಳನ್ನು ಅನುದಾನ ಲಭ್ಯತೆಯಂತೆ ಕೈಗೊಳ್ಳತಕ್ಕದ್ದು.
- ಎರಡು ಭಾಷಾ ಮಾಧ್ಯಮಗಳ ಶಾಲೆಗಳನ್ನು ಹೊಂದಿರುವ ಬೆಳಗಾವಿ, ಉತ್ತರ ಕನ್ನಡ, ಬಳ್ಳಾರಿ ಇತ್ಯಾದಿ ಜಿಲ್ಲೆಗಳಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಗಟ್ಟಿಗೊಳಿಸಲು.

- ಗಡಿಭಾಗದ ಮಕ್ಕಳು ನಿರ್ಲಕ್ಷ್ಯಕ್ಕೆ ಒಳಗಾಗದೇ ಶಾಲೆಗೆ ಬರುವಂತೆ ಮಾಡಲು.
- ಗಡಿಭಾಗದ ಶಾಲೆಗಳನ್ನು ಹೆಚ್ಚು ಆಕರ್ಷಕವನ್ನಾಗಿ ಮಾಡುವುದರ ಮೂಲಕ ಮಕ್ಕಳ ಜ್ಞಾನ ವಿಕಾಸಕ್ಕೆ ಕಾರಣವಾಗುವುದು.
- ಗಡಿಭಾಗದ ಕನ್ನಡ ಶಾಲೆಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು.
- ಶಾಲೆಗಳಲ್ಲಿ ನಿರಂತರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವುದು.
- ಕನ್ನಡದ ಕವಿ, ಕಲಾವಿದರ ಭಾವಚಿತ್ರಗಳನ್ನು ವಿತರಿಸುವುದು.
- ಎಲ್ಲಾ ರೀತಿಯ ಪೀಠೋಪಕರಣಗಳನ್ನು ನೀಡುವುದು.
- ನಿರಂತರ ತಪಾಸಣೆ ನಡೆಸುವ ಮೂಲಕ ಶಿಕ್ಷಣ ಗುಣಮಟ್ಟ ಹೆಚ್ಚಿಸುವುದು.
- ವಿದ್ಯಾರ್ಥಿಗಳು ಹಾಗೂ ಶಿಕ್ಷಕರ ಸಮಸ್ಯೆಗಳಿಗೆ ಸ್ಪಂದಿಸುವುದು.
- ಕಲಿಸುವುದು ಹಾಗೂ ಕಲಿಯುವುದನ್ನು ಆಶಾದಾಯಕ ನೆಲೆಗೆ ತರುವುದು.
- ಗಡಿಭಾಗದ ವಿದ್ಯಾರ್ಥಿವೃಂದಕ್ಕೆ ವಿಶೇಷ ಪ್ರವಾಸ ಏರ್ಪಡಿಸುವ ಮೂಲಕ ಅವರಿಗೆ ಕರ್ನಾಟಕ ದರ್ಶನ ಮಾಡಿಸುವುದು.
- ಶಿಕ್ಷಣ ಇಲಾಖೆಯೊಂದಿಗೆ ಸಮನ್ವಯ ಸಾಧಿಸಿ ಗಡಿನಾಡು ಶಿಕ್ಷಣಕ್ಕೆ ಉತ್ತೇಜಕವಾಗುವುದು.

ಮೇಲಿನಂತೆ ಕ್ರಮಗಳನ್ನು ಕೈಗೊಳ್ಳುವ ಮೂಲಕ ನಿರ್ದೇಶಕರು ಗಡಿ ಪ್ರದೇಶಗಳಲ್ಲಿ ಕನ್ನಡ ಮಾಧ್ಯಮ ಮತ್ತು ಶಿಕ್ಷಣವನ್ನು ವಿಸ್ತರಿಸಲು ಕ್ರಮ ಕೈಗೊಳ್ಳಬೇಕೆಂದು ಸರ್ಕಾರವು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

ಪಿ.ಆರ್.1116

## ಕಾನೂನು ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಶಾಸಕರು, ಭದ್ರಾವತಿ ಇವರ ಕೋರಿಕೆ ದಿನಾಂಕ: 13.01.05.
2. ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಶಿವಮೊಗ್ಗ ಇವರ ಪತ್ರ ದಿನಾಂಕ: 12.04.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 13.01.2005ರ ಪತ್ರದಲ್ಲಿ ಭದ್ರಾವತಿ ತಾಲ್ಲೂಕಿನಲ್ಲಿ 4 ಕೋರ್ಟ್‌ಗಳು ಇದ್ದು ಈಗ 2 ಕೋರ್ಟ್‌ಗಳು ಮಂಜೂರಾಗಿರುತ್ತವೆ, ತಾಲ್ಲೂಕಿನ ಜನಸಂಖ್ಯೆ ಹೆಚ್ಚುತ್ತಿದ್ದು, ವ್ಯಾಜ್ಯಗಳು ಹೆಚ್ಚುತ್ತಿರುವುದರಿಂದ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 12.04.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಶಿವಮೊಗ್ಗ ಇವರು ಭದ್ರಾವತಿ ತಾಲ್ಲೂಕಿನ ಜನಸಂಖ್ಯೆ ಮತ್ತು ವ್ಯಾಜ್ಯಗಳ ಹೆಚ್ಚಳ ಹಾಗೂ ಸರ್ಕಾರಿ ಕಚೇರಿಗಳಿಗೆ ಒದಗಿಸುವ ದಾಖಲೆ ಬಗ್ಗೆ ಹೆಚ್ಚಿನ ಒತ್ತಡವಿರುವುದರಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆ ಸೃಜಿಸುವಂತೆ ಅಭಿಪ್ರಾಯ ನೀಡಿರುತ್ತಾರೆ. ಮೇಲಿನ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 8 ಎಲ್‌ಸಿಎಲ್ 2005, ಬೆಂಗಳೂರು ದಿನಾಂಕ: 13ನೇ ಜುಲೈ 2005**

ಶಿವಮೊಗ್ಗ ಜಿಲ್ಲೆ ಭದ್ರಾವತಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಎ. ಬಾಬು ರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), (ಆಡಳಿತ-2), ಕಾನೂನು ಇಲಾಖೆ.

ಪಿ.ಆರ್.1118

**ವಿಷಯ :** ಶ್ರೀ ಕೆ. ಎಸ್. ಗೋಪಿನಾಥ್, ನೋಟರಿ, ಶಿವಮೊಗ್ಗ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಲಾ 85 ಎಲ್‌ಸಿಎಲ್ 2004, ದಿನಾಂಕ: 5.04.1997.
2. ನೋಟರಿಯವರ ಮನವಿ ದಿನಾಂಕ: 29.12.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 05.04.1997ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ. ಎಸ್. ಗೋಪಿನಾಥ್, ನೋಟರಿ, ಶಿವಮೊಗ್ಗ, ಇವರನ್ನು ಶಿವಮೊಗ್ಗ ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 29.12.04ರ ಮನವಿ ಪತ್ರದಲ್ಲಿ ಶ್ರೀ ಕೆ. ಎಸ್. ಗೋಪಿನಾಥ್, ರವರು ವೈಯಕ್ತಿಕ ಕಾರಣಗಳಿಂದಾಗಿ ತಾವು ನೋಟರಿ ಹುದ್ದೆಗೆ ರಾಜೀನಾಮೆ ನೀಡುತ್ತಿರುವುದಾಗಿ ತಿಳಿಸಿ ಅದನ್ನು ಅಂಗೀಕರಿಸಲು ಕೋರಿರುತ್ತಾರೆ. ಆದ್ದರಿಂದ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 85 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 14ನೇ ಜುಲೈ 2005**

ಶ್ರೀ ಗೋಪಿನಾಥ್, ನೋಟರಿ, ಶಿವಮೊಗ್ಗ ಇವರು ನೋಟರಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 29.12.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ ಮತ್ತು ಸದರಿಯವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಎ. ಬಾಬು ರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), (ಆಡಳಿತ-2), ಕಾನೂನು ಇಲಾಖೆ.

ಪಿ.ಆರ್.1119

| Sl.No. | Name of the Village | Ft.Sy.No. | Area in Ha. | Legal Status |
|---|---|---|---|---|
| 10 | Ghatagutti | 44 | 17.00 | -"= |
| | For Canals | | 39.87 | -"= |
| | For Dam & Dyke | | 13.00 | -"= |
| | | **Total** | **334.17 ha.** | |

1. The legal Status of the forest land shall remain unchanged.
2. Compensatory Afforestation shall be raised and maintained over equivalent non-forest land by the State Forest Department.
3. The non-forest land for compensatory afforestation shall be notified as Reserve Forests under Section-4 or PF under Section 29 of the Indian Forest Act,1927 or the State Forest Act within a period of 6 months and Nodal Officer(Forest Conservation) shall report the compliance.
4. Penal compensatory afforestation shall be raised and maintained over 16 ha. of degraded forest land.
5. Along the Banks of the Reservoir and Canals, plantation shall be raised and maintained over 16 ha. of degraded forest land by the State Forest Department.
6. Demarcation of the area will be done on ground at project cost using four feet high RCC pillars with serial numbers, forward and back bearings and distance from pillar to pillar.
7. Tree shall not be felled upto 4 meter bellow FRL.
8. Trees shall be felled only when it becomes necessary and under strict supervision of Forest Department.
9. Area of the reservoir other than forest, shall be declared as `Reserved Forest` under Indian Forest Act,1927 and regulated fishing rights shall be allowed.
10. Water will be provided free of cost to the Forest Department for raising nursery/plantations in nearby areas.
11. No labour camps shall be established on the forest land. Labourers shall be provided fuelwood after procuring it from the State Forest Development Corporation/ Government Depots.
12. Catchments area treatments work shall be executed as per the plan by the State Forest Department.
13. The Resettlement and Rehabilitation Plan shall be implemented by the State Government in a time bound manner. The State Government will submit the progress report at every quarter to the Regional Office, Bangalore, in this regard.
14. The forest land shall be used in accordance with the land use plan specified below:-

| | |
|---|---|
| Submergence | 263.71 ha. |
| Dam Seat | 7.00 ha. |
| Canals | 39.87 ha. |
| Roads | 7.48 ha. |
| Dykes | 6.00 ha. |
| Buildings | 1.50 ha. |
| Dumpyard | 8.61 ha.(Temporary use) |

15. This lease shall be treated as perpetual lease.
16. The user agency shall ensure that there should be no damage to the available wildlife.
17. The lessee shall pay the lease rent as fixed by the Government from time to time.
18. The leased out area should be used for the purpose for which it is granted. In case the land is not used for the stipulated purpose or when it is no longer needed for the stipulated purpose the area will be forfeited to the Forest Department under Section 82 of Karnataka Forest Act, 1963.
19. The user agency shall pay the cost of raising compensatory afforestation at the rate prevailing at the time of approval (Now it is Rs.54,200-00 per ha.)
20. The user agency has to pay the Net present value (NPV) fixed by Government vide Notification No. FEE 247 FGL 2002, dated: 17.1.2004.
21. Karnataka Forest Act 1963 and Rules 1969 will be applicable for any violation
22. The approval under the Forest (Conservation)Act, 1980 is subject to the clearance under the Environment (Protection) Act,1986, if required.
23. All the safeguards and conditions stipulated by the Indian Board of Wildlife(IBWL) shall be strictly followed.
24. Irrigation Department should provide water canal to raise Irrigated plantations by the Forest Department as and when required.
25. Before making an agreement/releasing of land to the user agency the Survey numbers of the canals and dam & dyke should be specified.

26. The user agency shall abide by all the conditions imposed upon by Government of India, Government of Karnataka and principal Chief Conservator of Forests.
27. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By order and in the name of the Governor of Karnataka,

**S.R.VATSALA**

PR-1130

Under Secretary to Government,
Forest, Ecology and Environment Department.

**Sub :** Renewal for diversion of 1.22 ha. of forest land leased to Ramakunjeshwara Vidyavardaka Sabha, Puttur Taluk, Mangalore Forest Division, D.K. District.

**Read :**
1. Letter No.A5(3)GFL.CR.7/04-05 dated 7.10.2004 of Principal Chief Conservator of Forests, Bangalore.
2. State Government letter No.FEE 173 FLL 2004, dated :21.2.2005.
3. Letter No. F(C)A/11.2/100/KAR,dated 10-5-2005 of the Government of India, Ministry of Environment and Forests, Regional Office, (Southern Zone), Bangalore.

**Preamble:**

The Principal Chief Conservator of Forests, Bangalore vide his letter dated 7.10.2004 read at (1) above has submitted the proposal to obtain the approval of Government of India for renewal for diversion of 1.22 ha. of forest land leased to Ramakunjeshwara Vidyavardaka Sabha, Puttur Taluk, Mangalore Forest Division, D.K.District. subject to certain conditions.

Accordingly, the proposal was recommended to Government of India, vide State Government letter dated: 21.2.2005 read at (2) above.

Finally Government of India, Ministry of Environment and Forests, Regional Office, (Southern Zone), Bangalore vide their letter dated: 10-5-2005 read at (3) above have conveyed their approval (Stage-II) for renewal for a period of 20 years with effect from 11.02.2002 subject to certain conditions. The proposal has been examined in detail and hence the order.

**GOVERNMENT ORDER NO. FEE 173 FLL 2004, BANGALORE, DATED: 28TH JULY 2005**

In the circumstances explained above, Government are pleased to accord sanction under section (2) of Forest (Conservation) Act 1980 for renewal of diversion of 1.22 ha. of forest land leased to Ramakunjeshwara Vidyavardaka Sabha, Puttur Taluk, Mangalore Forest Division, D.K.District.with effect from 11.02.2002 subject to the following conditions:

1. The legal status of forest land shall remain unchanged.
2. The user agency has to pay the NPV for forest land diverted under this proposal in accordance with Govt.Notification dated 17.1.2004.
3. All the funds obtained as NPV of diverted forest land should be deposited with Compensatory Afforestation Fund Management and Planning Authority (CAMPA).
4. The total forest area utilized for the project shall not exceed 1.22 ha. and the land should be used only for the purpose for which it is granted. In case the land is not used for the stipulated purpose within a reasonable time or when it no longer needed for the stipulated purpose or if any violation of conditions of Government Order/agreement the area shall forfeited to Government by Deputy Conservator of Forests under section 82 of Karnataka Forest Act 1968.
5. The lease is for a period of 20 years.
6. The lessee shall pay the lease rent as fixed by the Government from time to time.
7. Compensatory Plantation shall be raised at the cost of user agency over double the area in degraded forest land. The user agency has to pay the charges of compensatory afforestation at the rate prevailing at the time of approval.
8. If the land is no longer needed for the stipulated purpose the area would automatically revert back to the Forest Department.
9. The user agency shall abide by all the conditions imposed upon by Government of India, Government of Karnataka and Principal Chief Conservator of Forests.
10. The Karnataka Forest Act, 1963 and Rules, 1969 will be applicable for any violation.
11. Any other conditions to be stipulated by the State Government/Principal Chief Conservator of Forests, Karnataka in the interest of conservation of forests.

The compliance of condition No. (2) and (3) above shall be intimated to Chief Conservator of Forests (Central), Bangalore and to the State Government within a period of three months.

By order and in the name of the Governor of Karnataka,

**S.R.VATSALA**

PR-1131

Under Secretary to Government,
Forest, Ecology and Environment Department.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು 2005–06 ರಿಂದ 2012–13 ರವರೆಗೆ ಅನುಷ್ಠಾನಗೊಳಿಸಲು ವಿಶೇಷ ಅಧಿಕಾರಸ್ಥ ಸಮಿತಿ ಹಾಗೂ 3 ಸಲಹಾ ಸಮಿತಿಗಳನ್ನು ರಚಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂ: ಅಪಜೀ 279 ಎಫ್‌ಎಪಿ 2003, ದಿನಾಂಕ: 23–05–2005.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರಸಂಖ್ಯೆ: ಎ1/ ಕೆಎಸ್‌ಎಂಬಿ/ ಆಮಂ/ ಸಿಆರ್–8 ಮತ್ತು 9/2005–06, ದಿನಾಂಕ: 25–04–2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 23–05–2005ರ ಆದೇಶದಲ್ಲಿ ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು 2005–06ನೇ ಸಾಲಿನಿಂದ 2012–13ನೇ ಸಾಲಿನವರೆಗೆ ಕರ್ನಾಟಕ ರಾಜ್ಯದ ಎಲ್ಲಾ 27 ಜಿಲ್ಲೆಗಳಲ್ಲಿ 8 ವರ್ಷಗಳ ಅವಧಿಯಲ್ಲಿ ರೂ. 745.00 ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ವಿಶೇಷ ಅಧಿಕಾರಸ್ಥ ಸಮಿತಿ, ರಾಜ್ಯಮಟ್ಟದ ಸಲಹಾ ಸಮಿತಿ, ವೃತ್ತ ಮಟ್ಟದ ಸಲಹಾ ಸಮಿತಿ ಮತ್ತು ಅರಣ್ಯ ವಿಭಾಗೀಯ ಮಟ್ಟದಲ್ಲಿನ ಕಾರ್ಯಕಾರಿ ಸಮಿತಿಯನ್ನು ರಚಿಸಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವ ವೈವಿಧ್ಯ ಸಂರಕ್ಷಣಾ ಯೋಜನೆಯನ್ನು ರೂ. 745.00 ಕೋಟಿ ಅಂದಾಜು ವೆಚ್ಚದ ಪ್ರಸ್ತಾವನೆಯನ್ನು 2005–06 ರಿಂದ 2012–2013 ರವರೆಗೆ ಅನುಷ್ಠಾನಗೊಳಿಸಲು ವಿಶೇಷ ಅಧಿಕಾರಸ್ಥ ಸಮಿತಿ, ರಾಜ್ಯಮಟ್ಟದ ಸಲಹಾ ಸಮಿತಿ, ವೃತ್ತ ಮಟ್ಟದ ಸಲಹಾ ಸಮಿತಿ ಮತ್ತು ಅರಣ್ಯ ವಿಭಾಗೀಯ ಮಟ್ಟದಲ್ಲಿನ ಕಾರ್ಯಕಾರಿ ಸಮಿತಿಯನ್ನು ರಚಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

### ಸರ್ಕಾರಿ ಆದೇಶ ಸಂ: ಅಪಜೀ 108 ಎಫ್‌ಎಪಿ 2005, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2005

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಗೆ 2005–06ನೇ ಸಾಲಿನಿಂದ 2012–13ನೇ ಸಾಲಿನವರೆಗೆ ಕರ್ನಾಟಕ ರಾಜ್ಯದ ಎಲ್ಲಾ 27 ಜಿಲ್ಲೆಗಳಲ್ಲಿ 8 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ವಿಶೇಷ ಅಧಿಕಾರಸ್ಥ ಸಮಿತಿ ಹಾಗೂ ರಾಜ್ಯಮಟ್ಟದ ಸಲಹಾ ಸಮಿತಿ, ವೃತ್ತ ಮಟ್ಟದ ಸಲಹಾ ಸಮಿತಿ ಮತ್ತು ಅರಣ್ಯ ವಿಭಾಗೀಯ ಮಟ್ಟದಲ್ಲಿನ ಕಾರ್ಯಕಾರಿ ಸಮಿತಿಗಳನ್ನು ಸರ್ಕಾರವು ರಚಿಸಿದೆ.

### 1. ವಿಶೇಷ ಅಧಿಕಾರಸ್ಥ ಸಮಿತಿ

1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ – ಅಧ್ಯಕ್ಷರು
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅಪಜೀ ಇಲಾಖೆ – ಸದಸ್ಯರು
3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ – ಸದಸ್ಯರು
4) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ – ಸದಸ್ಯರು
5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ – ಸದಸ್ಯರು
6) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ – ಸದಸ್ಯರು
7) ಜೆಬಿಐಸಿ ಸಂಸ್ಥೆಯ ಪ್ರತಿನಿಧಿ – ಸದಸ್ಯರು
8) ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಯೋಜನಾ ನಿರ್ದೇಶಕರು – ಸದಸ್ಯ ಕಾರ್ಯದರ್ಶಿ

ಮೇಲ್ಕಂಡ ಸಮಿತಿಯು ಯೋಜನೆಯ ವಿವಿಧ ಘಟಕಗಳ ಅನುಷ್ಠಾನದ ಕಾರ್ಯಗಳ ಕರಾರು ಅಥವಾ ಸೇವೆಗಳನ್ನು ಅಂಗೀಕರಿಸಲು, ಸಂಶೋಧನೆ ಅಧ್ಯಯನ ಮಾಡಲು ಯೋಜನಾ ಅನುಷ್ಠಾನದ ಬಗ್ಗೆ, ಮುಖ್ಯ ವಿಚಾರಗಳ ಬಗ್ಗೆ ತೀರ್ಮಾನ ಕೈಗೊಳ್ಳಲು ಎಲ್ಲಾ ವಿಧವಾದ ಖರೀದಿಗಳನ್ನು ಮತ್ತು ಎಲ್ಲಾ ವಿಧವಾದ ಅಗತ್ಯತೆಗಳಿಗೆ ಮಂಜೂರಾತಿಯನ್ನು ನೀಡಲು ಅಧಿಕಾರ ಹೊಂದಿರುತ್ತದೆ. ಈ ಸಮಿತಿಯು ರಾಜ್ಯಮಟ್ಟದ ಸಲಹಾ ಸಮಿತಿಯು ನೀಡುವ ಸಲಹೆ/ಶಿಫಾರಸ್ಸನ್ನು ಪರಿಶೀಲಿಸಿ ನಿರ್ಣಯವನ್ನು ಕೈಗೊಳ್ಳುವುದು. ಈ ಸಮಿತಿಯು ಕನಿಷ್ಟ 4 ತಿಂಗಳಿಗೊಮ್ಮೆ ಸಭೆ ನಡೆಸತಕ್ಕದ್ದು.

ಹಣಕಾಸು ವಿಚಾರಗಳಿಗೆ ಸಂಬಂಧಪಟ್ಟಂತೆ ಆರ್ಥಿಕ ಇಲಾಖೆಯ ಪ್ರತಿನಿಧಿಗಳ ಅಭಿಪ್ರಾಯವನ್ನು ಸಮಿತಿಯು ತಳ್ಳಿಹಾಕಿದ್ದಲ್ಲಿ, ಅಂತಹ ವಿಚಾರಗಳನ್ನು ಸಮಿತಿಯ ಶಿಫಾರಸ್ಸಿನೊಡನೆ ಸಚಿವ ಸಂಪುಟದ ಮುಂದೆ ತರತಕ್ಕದ್ದು.

### 2. ರಾಜ್ಯಮಟ್ಟದ ಸಲಹಾ ಸಮಿತಿ

1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. – ಅಧ್ಯಕ್ಷರು
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. – ಸದಸ್ಯರು
3) ಸರ್ಕಾರದ ಕಾರ್ಯದರ್ಶಿ (ಆ ಮತ್ತು ಸಂ), ಆರ್ಥಿಕ ಇಲಾಖೆ. – ಸದಸ್ಯರು

| | | |
|---|---|---|
| 4) | ಸರ್ಕಾರದ ಕಾರ್ಯದರ್ಶಿ,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ | – ಸದಸ್ಯರು |
| 5) | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,<br>ಅರಣ್ಯಭವನ, ಬೆಂಗಳೂರು. | – ಸದಸ್ಯರು |
| 6) | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಸಾ.ಅ),<br>ಅರಣ್ಯಭವನ, ಬೆಂಗಳೂರು. | – ಸದಸ್ಯರು |
| 7) | ನಿರ್ದೇಶಕರು,<br>ಪಶುಸಂಗೋಪನೆ ಇಲಾಖೆ. | – ಸದಸ್ಯರು |
| 8) | ನಿರ್ದೇಶಕರು,<br>ರೇಷ್ಮೆ ಇಲಾಖೆ. | – ಸದಸ್ಯರು |
| 9) | ಪ್ರಾಧ್ಯಾಪಕರು ಮತ್ತು ಇಲಾಖಾ ಮುಖ್ಯಸ್ಥರು,<br>ಅರಣ್ಯ ವಿಜ್ಞಾನ, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು. | – ಸದಸ್ಯರು |
| 10) | ಓ.ಇ.ಸಿ.ಎಫ್.(ಜೆಬಿಐಸಿ) ಪ್ರತಿನಿಧಿ | – ಸದಸ್ಯರು |
| 11) | ಇಲಾಖಾ ಮುಖ್ಯಸ್ಥರು,<br>ಸಾಮಾಜಿಕ ಆರ್ಥಿಕ ಪರಿವರ್ತನೆ ಸಂಸ್ಥೆ, ಬೆಂಗಳೂರು. | – ಸದಸ್ಯರು |
| 12) | ಅಗರಬತ್ತಿ ಉದ್ಯಮದ ಸಂಘದ ಪ್ರತಿನಿಧಿ | – ಸದಸ್ಯರು |
| 13) | ಆಯುರ್ವೇದ ಔಷಧ ಕೈಗಾರಿಕೆ ಸಂಘದ ಪ್ರತಿನಿಧಿ | – ಸದಸ್ಯರು |
| 14) | ಇಟ್ಟಿಗೆ, ಹೆಂಚು ಮತ್ತು ಹೊಗೆಸೊಪ್ಪು<br>ಕೈಗಾರಿಕೆಗಳ ಸಂಘದ ಪ್ರತಿನಿಧಿ | – ಸದಸ್ಯರು |
| 15) | ಯೋಜನಾ ಸಮನ್ವಯಾಧಿಕಾರಿ ಹಾಗೂ<br>ಪಿ.ಎಂ.ಯು. ಮುಖ್ಯಸ್ಥರು, ಬೆಂಗಳೂರು | – ಸದಸ್ಯ ಕಾರ್ಯದರ್ಶಿ |
| 16) | ಬಿದಿರು ಬಳಕೆದಾರರ (ಮೇದಾರ್) ಸಂಘದ ಪ್ರತಿನಿಧಿ | – ಸದಸ್ಯರು |
| 17) | (Foundation of Revitalisation of Local Health Traditions)<br>ಎಫ್.ಆರ್.ಎಲ್.ಹೆಚ್.ಟಿ.ಯ ಪ್ರತಿನಿಧಿ | – ಸದಸ್ಯರು |
| 18) | ಫಾವಾರ್ಡ್ ಕೆ. ಪ್ರತಿನಿಧಿ<br>(Federation of Voluntary Organisation Rural Development in Karnataka) | – ಸದಸ್ಯರು |

ಈ ಸಮಿತಿಯು ಕನಿಷ್ಠ 2 ತಿಂಗಳಿಗೊಮ್ಮೆ ಸಭೆ ನಡೆಸಬೇಕಾಗುತ್ತದೆ.. ಈ ಸಮಿತಿಯು ಯೋಜನೆಯ ಎಲ್ಲಾ ಪ್ರಸ್ತಾವನೆಗಳ ಬಗ್ಗೆ ಪರಿಶೀಲಿಸಿ ಅಭಿಪ್ರಾಯ/ಸಲಹೆಗಳೊಂದಿಗೆ ಸೂಕ್ತ ಪ್ರಸ್ತಾವನೆಗಳನ್ನು ವಿಶೇಷ ಅಧಿಕಾರಸ್ಥ ಸಮಿತಿಯ ಮುಂದೆ ಸಲ್ಲಿಸಬೇಕಾಗಿರುತ್ತದೆ. ವಿಶೇಷ ಅಧಿಕಾರಸ್ಥ ಸಮಿತಿಯಿಂದ ಅನುಮೋದಿಸಲ್ಪಟ್ಟ ಯೋಜನಾ ಕಾರ್ಯಕ್ರಮಗಳನ್ನು ಸಕಾಲದಲ್ಲಿ ಅನುಷ್ಠಾನಗೊಳಿಸುತ್ತಿರುವ ಬಗ್ಗೆ ಪರಿಶೀಲಿಸತಕ್ಕದ್ದು.

## 3. ವೃತ್ತಮಟ್ಟದ ಸಲಹಾ ಸಮಿತಿ

| | | |
|---|---|---|
| 1) | ವೃತ್ತದ ಅರಣ್ಯ ಸಂರಕ್ಷಣಾಧಿಕಾರಿ | – ಅಧ್ಯಕ್ಷರು |
| 2) | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ,<br>ಜಿಲ್ಲಾ ಪಂಚಾಯತ್. | – ಸದಸ್ಯರು |
| 3) | ಉಪ ಅರಣ್ಯ ಸಂರಕ್ಷಣಾಧಿಕಾರಿ(ಪ್ರಾದೇಶಿಕ) | – ಸದಸ್ಯರು |
| 4) | ಉಪ ಅರಣ್ಯ ಸಂರಕ್ಷಣಾಧಿಕಾರಿ (ಜಿಲ್ಲಾ ಪಂಚಾಯತ್) | – ಸದಸ್ಯರು |
| 5) | ಜಿಲ್ಲಾಧಿಕಾರಿ (ಅಧಿಕಾರಿ ಕ್ಷೇತ್ರದ) | – ಸದಸ್ಯರು |
| 6) | ಜಿಲ್ಲಾ ಮುಖ್ಯಸ್ಥರು,<br>ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವೆಗಳು | – ಸದಸ್ಯರು |
| 7) | ಉಪ ನಿರ್ದೇಶಕರು, ರೇಷ್ಮೆ ಇಲಾಖೆ | – ಸದಸ್ಯರು |
| 8) | ಜೆಬಿಐಸಿ ಪ್ರತಿನಿಧಿ | – ಸದಸ್ಯರು |
| 9) | ಕೃಷಿ ವಿಶ್ವವಿದ್ಯಾಲಯದ ಪ್ರತಿನಿಧಿ | – ಸದಸ್ಯರು |
| 10) | ಸ್ಥಳೀಯ ವ್ಯಾಪ್ತಿಯಲ್ಲಿ ಬರುವ ವಿಶ್ವವಿದ್ಯಾನಿಲಯದ ಪ್ರತಿನಿಧಿ | – ಸದಸ್ಯರು |
| 11) | ಸರ್ಕಾರೇತರ ಸಂಸ್ಥೆಯ ಇಬ್ಬರು ಸದಸ್ಯರು (ಅರಣ್ಯ ಸಚಿವರಿಂದ ನಾಮ ನಿರ್ದೇಶಿತ) | – ಸದಸ್ಯರು |
| 12) | ಯೋಜನಾ ಕ್ಷೇತ್ರದ ಅಧಿಕಾರೇತರ ಇಬ್ಬರು ಸದಸ್ಯರು<br>(ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಸಾಮಾಜಿಕ ಅರಣ್ಯ)<br>ರವರಿಂದ ನಾಮ ನಿರ್ದೇಶಿತ) | – ಸದಸ್ಯರು |
| 13) | ಉಪ ಅರಣ್ಯ ಸಂರಕ್ಷಣಾಧಿಕಾರಿ<br>(ಯೋಜನಾ ನಿಯಂತ್ರಣಕೋಶ ವೃತ್ತದಲ್ಲಿ ಬರುವ) | – ಸದಸ್ಯ ಕಾರ್ಯದರ್ಶಿ |
| 14) | ಉಪ ಅರಣ್ಯ ಸಂರಕ್ಷಣಾಧಿಕಾರಿ (ಸಂಯುಕ್ತ ಅರಣ್ಯ ಯೋಜನೆ) | – ಸದಸ್ಯರು |
| 15) | ಉಪ ಅರಣ್ಯ ಸಂರಕ್ಷಣಾಧಿಕಾರಿ (ಕಾರ್ಯಯೋಜನೆ) | – ಸದಸ್ಯರು |

16) ಬಿದಿರು ಬಳಕೆದಾರರ (ಮೇದಾರ್) ಸಂಘದ ಪ್ರತಿನಿಧಿ – ಸದಸ್ಯರು
17) ಅಗರಬತ್ತಿ ಉದ್ಯಮದ ಸಂಘದ ಪ್ರತಿನಿಧಿ – ಸದಸ್ಯರು

ಈ ಸಮಿತಿಯು ಕನಿಷ್ಟ 2 ತಿಂಗಳಿಗೊಮ್ಮೆ ಸಭೆ ನಡೆಸತಕ್ಕದ್ದು.

### 4. ಅರಣ್ಯ ವಿಭಾಗೀಯ ಮಟ್ಟದಲ್ಲಿನ ಕಾರ್ಯಕಾರಿ ಸಮಿತಿ

1) ಉಪ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ) – ಅಧ್ಯಕ್ಷರು
2) ಉಪ ಅರಣ್ಯ ಸಂರಕ್ಷಣಾಧಿಕಾರಿ (ಸಾಮಾಜಿಕ ಅರಣ್ಯ) – ಸದಸ್ಯರು
3) ಸಹಾಯಕ ಕಮಿಷನರ್ (ಅಧಿಕಾರ ಕ್ಷೇತ್ರದ) – ಸದಸ್ಯರು
4) ಸಹಾಯಕ ನಿರ್ದೇಶಕರು (ಪಶುಸಂಗೋಪನೆ) – ಸದಸ್ಯರು
5) ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಸಂಯುಕ್ತ ಅರಣ್ಯ ಯೋಜನೆ) – ಸದಸ್ಯರು
6) ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ) – ಸದಸ್ಯರು
7) ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಸಾಮಾಜಿಕ ಅರಣ್ಯ) ಉಪ ವಿಭಾಗ – ಸದಸ್ಯರು
8) ಉಪ ಅರಣ್ಯ ಸಂರಕ್ಷಣಾಧಿಕಾರಿ/ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಒಣಭೂಮಿ ಅಭಿವೃದ್ಧಿ ಮಂಡಳಿ (ಆಯಾ ಪ್ರದೇಶದ) – ಸದಸ್ಯರು
9) ಕೃಷಿ ಪ್ರಧಾನಾಧಿಕಾರಿ – ಸದಸ್ಯರು
10) ಜಿಲ್ಲಾ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ – ಸದಸ್ಯರು
11) ಇಬ್ಬರು ಸ್ಥಳೀಯ ಸಮುದಾಯ ಸದಸ್ಯರು (ಅರಣ್ಯ ಸಂರಕ್ಷಣಾಧಿಕಾರಿರವರಿಂದ ನಾಮ ನಿರ್ದೇಶಿತ) – ಸದಸ್ಯರು
12) ಇಬ್ಬರು ಅರಣ್ಯ ಉತ್ಪನ್ನಗಳ ಬಳಕೆದಾರರು (ಅರಣ್ಯ ಸಂರಕ್ಷಣಾಧಿಕಾರಿರವರಿಂದ ನಾಮ ನಿರ್ದೇಶಿತ) – ಸದಸ್ಯರು
13) ಅಗರಬತ್ತಿ/ಹೆಂಚು/ಸುಣ್ಣ/ಹೊಗೆಸೊಪ್ಪು/ಇಟ್ಟಿಗೆ ಉದ್ಯಮ ಸಂಘದ ಸದಸ್ಯರು – ಸದಸ್ಯರು
14) (Foundation of Revitalisation of Local Health Traditions) ಎಫ್.ಆರ್.ಎಲ್.ಹೆಚ್.ಟಿ. ರವರು ರಚಿಸಿದ ಎಂ.ಪಿ.ಡಿ.ಎ. – ಸದಸ್ಯರು
15) ಸ್ಥಳೀಯ ನಾಟಿ ವೈದ್ಯರು ಮತ್ತು ಆಯುರ್ವೇದ ವೈದ್ಯರು – ಸದಸ್ಯರು

ಮೇಲೆ ಹೇಳಿದ 2, 3 ಮತ್ತು 4 ಸಮಿತಿಗಳ ಅಧ್ಯಕ್ಷರುಗಳು ಮತ್ತು ಸದಸ್ಯರುಗಳು ಯಾವುದೇ ರೀತಿಯ ಸಂಭಾವನೆ ಭತ್ಯೆಗೆ ಅರ್ಹರಿರುವುದಿಲ್ಲ. ವೃತ್ತಮಟ್ಟದ ಸಲಹಾ ಸಮಿತಿ ಮತ್ತು ಅರಣ್ಯ ವಿಭಾಗೀಯ ಮಟ್ಟದಲ್ಲಿನ ಕಾರ್ಯಕಾರಿ ಸಮಿತಿಗಳು ಯೋಜನೆಯನ್ನು ನಿಗದಿತ ಕಾಲಾವಧಿಯಲ್ಲಿ ಅನುಷ್ಠಾನಗೊಳಿಸಲು ಎಲ್ಲಾ ರೀತಿಯ ಸಹಕಾರ ನೀಡತಕ್ಕದ್ದು ಮತ್ತು ಯೋಜನೆಯ ಆರ್ಥಿಕ ಮತ್ತು ಭೌತಿಕ ಪ್ರಗತಿಯನ್ನು ಪರಿಶೀಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 379 ವೆಚ್ಚ–2/2005, ದಿನಾಂಕ: 28–06–2005 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಆರ್. ವತ್ಸಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್.1146

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ಎಂ.ದೊಡ್ಡಪ್ಪ, ಶ್ರೀ ಎಲ್.ವೇಣುಗೋಪಾಲ್, ಶ್ರೀ ಎನ್.ಉದಯಕುಮಾರ್, ಶ್ರೀ ವಿ.ಅಶೋಕ ಕುಮಾರ್, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ :**
೧. ಕಂದಾಯ ಇಲಾಖೆಯ (ಭೂ.ಸು.ಕೋಶ) ಆದೇಶ ಸಂಖ್ಯೆ: ಆರ್‌ಡಿ ೨೬೫ ಎಂಎಸ್‌ಟಿ ೨೦೦೧, ದಿನಾಂಕ:೧೧.೯.೨೦೦೨.
೨. ಸರ್ಕಾರದ ಕಾರಣ ಕೇಳುವ ನೋಟಿಸ್ ಸಂಖ್ಯೆ: ಆನಾಸ ೨೫೧ ಆಇಸೇ ೨೦೦೩, ದಿನಾಂಕ:೦೬.೦೨.೨೦೦೪.
೩. ಶ್ರೀ ವಿ.ಅಶೋಕ ಕುಮಾರ್, ಎನ್.ಉದಯಕುಮಾರ್, ಶ್ರೀ ವೇಣುಗೋಪಾಲ್ ಹಾಗೂ ಶ್ರೀ ಎಂ.ದೊಡ್ಡಪ್ಪನವರ ಹೇಳಿಕೆಗಳು ಕ್ರಮವಾಗಿ ದಿನಾಂಕ:೨೩.೨.೨೦೦೪, ೫.೩.೨೦೦೪, ಹಾಗೂ ೨೪.೨.೨೦೦೪.

**ಪ್ರಸ್ತಾವನೆ:**

ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಗೆ ಸೇರಿದ ಸರ್ಕಾರಿ ವಾಹನ ಸಂಖ್ಯೆ: ಸಿಕೆಜಿ ೩೬೪ ದಿನಾಂಕ:೧೩.೧.೯೨ರಂದು ಅಪಘಾತಕ್ಕೀಡಾಗಿ ಸ್ಕೂಟರ್ ಸವಾರನಿಗೆ ಅಪಘಾತ ಪರಿಹಾರ ಮಂಡಳಿಯು ರೂ.೫೦,೦೦೦/- ಗಳ ಪರಿಹಾರ ನೀಡಬೇಕೆಂದು ಆದೇಶಿಸಿದ ಹಿನ್ನೆಲೆಯಲ್ಲಿ ಆ ಸಮಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಉಪನಿರ್ದೇಶಕರಾದ ಶ್ರೀ ವಿ.ದೊಡ್ಡಪ್ಪ, ವ್ಯವಸ್ಥಾಪಕರಾದ ಶ್ರೀ ಎನ್.ವೇಣುಗೋಪಾಲ, ಪ್ರ.ದ.ಸ., ಶ್ರೀ ಎನ್.ಉದಯಕುಮಾರ್ ಮತ್ತು ವಾಹನ ಚಾಲಕರಾದ ಶ್ರೀ ವಿ.ಅಶೋಕ್ ಕುಮಾರ್ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ತಪ್ಪಿತಸ್ಥರೆಂದು ಕಂಡು ಬಂದಲ್ಲಿ ಸದರಿಯವರಿಂದಲೇ ಈ ಹಣವನ್ನು ವಸೂಲು ಮಾಡುವಂತೆ ಆದೇಶಿಸಿ ಕಂದಾಯ ಇಲಾಖೆಯು ಆದೇಶ ಹೊರಡಿಸಿದೆ.

ಮೇಲೆ (೨)ರಲ್ಲಿ ಓದಲಾದ ಸರ್ಕಾರದ ಕಾರಣ ಕೇಳುವ ನೋಟಿಸ್‌ನಲ್ಲಿ ಈ ದುರ್ನಡತೆಗೆ ೧೯೫೭ರ ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಗಳಡಿಯಲ್ಲಿ ಶಿಸ್ತು ಕ್ರಮಕ್ಕಾಗಿ ಅವರುಗಳಿಂದ ಸಮಜಾಯಿಷಿಯನ್ನು ಕೇಳಲಾಗಿತ್ತು.

ಮೇಲೆ (೩)ರಲ್ಲಿ ಓದಲಾದ ಅವರುಗಳ ಹೇಳಿಕೆಗಳಲ್ಲಿ ಶ್ರೀ ವೇಣುಗೋಪಾಲರವರು ಮಾತ್ರ ತಮ್ಮ ಪಾಲಿಗೆ ಬರುವ ಹಣವನ್ನು ಕಟ್ಟಿಕೊಡುವುದಾಗಿ ತಿಳಿಸಿರುತ್ತಾರೆ. ಉಳಿದಂತೆ ಶ್ರೀ ದೊಡ್ಡಪ್ಪ, ಅಂದಿನ ಉಪನಿರ್ದೇಶಕರು ಹಾಗೂ ಶ್ರೀ ಎನ್.ಉದಯಕುಮಾರ್, ಪ್ರ.ದ.ಸ. ರುಗಳು ತಮ್ಮ ಮೇಲಿನ ಆರೋಪ ನಿರಾಕರಿಸಿ ಹಣ ಪಾವತಿ ಪ್ರಶ್ನೆ ಉದ್ಭವಿಸುವುದಿಲ್ಲವೆಂದು ತಿಳಿಸಿರುತ್ತಾರೆ. ಇನ್ನು ಚಾಲಕರಾದ ಶ್ರೀ ವಿ.ಅಶೋಕ್‌ಕುಮಾರ್‌ರವರು ತಮ್ಮನ್ನು ಕ್ಷಮಿಸುವಂತೆ ಕೋರಿರುತ್ತಾರೆ.

ಆದರೆ ಇವರುಗಳ ಹೇಳಿಕೆಯನ್ನು ಒಪ್ಪಲಾಗುವುದಿಲ್ಲ. ಈ ಆರೋಪದಲ್ಲಿ ಇವರುಗಳೆಲ್ಲರೂ ಸಹ ಭಾಗಿಗಳಾಗಿರುವುದರಿಂದ ಇವರುಗಳ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ ೨೫೧ ಆಇಸೇ ೨೦೦೩, ಬೆಂಗಳೂರು, ದಿನಾಂಕ:೨ನೇ ಆಗಸ್ಟ್ ೨೦೦೫**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳೂ ೧೯೫೭ರ ನಿಯಮ ೧೧ ಮತ್ತು ೧೩ರನ್ವಯ ಶ್ರೀ ಎಂ.ದೊಡ್ಡಪ್ಪ, ಅಂದಿನ ಉಪನಿರ್ದೇಶಕರು, ಶ್ರೀ ಎಲ್.ವೇಣುಗೋಪಾಲ್, ವ್ಯವಸ್ಥಾಪಕರು, ಶ್ರೀ ಎನ್.ಉದಯಕುಮಾರ್, ಪ್ರ.ದ.ಸ.ರು ಹಾಗೂ ಶ್ರೀ ವಿ.ಅಶೋಕ ಕುಮಾರ್, ವಾಹನ ಚಾಲಕರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು, ಸಂಖ್ಯೆ:೨೨೧೧, ೮೦ ಅಡಿ ರಸ್ತೆ, ಕೋಡಿಹಳ್ಳಿ ಅಡ್ಡ ರಸ್ತೆ, ಹೆಚ್.ಎ.ಎಲ್ ೩ನೇ ಹಂತ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ, ಹಾಗೂ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧ರ ಉಪನಿಯಮ ೫(ಸಿ)ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಪ್ರಾಧಿಕಾರಿಯ ಪರವಾಗಿ ವಿಷಯವನ್ನು ಮಂಡಿಸಲು ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಆಯುಕ್ತರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೆಯೇ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.೫,೦೦೦/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಆಯುಕ್ತರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಬೆಂಗಳೂರು ಇವರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ೩ ತಿಂಗಳೊಳಗಾಗಿ ಮುಗಿಸಿ ಸೂಕ್ತ ದಾಖಲೆಗಳೊಂದಿಗೆ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಕಳುಹಿಸುವಂತೆ ನಿರ್ದೇಶಿಸಿದೆ.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೮ರಡಿ ತಿಳಿಸಲಾದ ಯಾವುದೇ ದಂಡನೆಯನ್ನು ವಿಧಿಸಲು ಸರ್ಕಾರ ಸಕ್ಷಮ ಪ್ರಾಧಿಕಾರವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್.ವಿಶ್ವೇಶ್ವರಯ್ಯ**

ಪಿ.ಆರ್.1113

ಪೀಠಾಧಿಕಾರಿ, ಆಹಾರ-೧ ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ವಿಷಯ :** ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ಶೇ.೮೦ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ. - ಗ್ರೂಪ್ ಡಿ ಹುದ್ದೆಗಳನ್ನು ರದ್ದುಪಡಿಸಲು ಆದೇಶ.

**ಓದಲಾಗಿದೆ :**

1. ಅಪರ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿಯ ನಡವಳಿ ಸಂಖ್ಯೆ:ಸಿಆಸುಇ ೭ ಈಕಾಅ ೨೦೦೫, ದಿನಾಂಕ:೧.೬.೨೦೦೫.
2. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ಪತ್ರಸಂಖ್ಯೆ: ಕಾಮಾಇ/ಸಿಬ್ಬಂದಿ-೧/ಸಿಆರ್-೯೦/೦೫-೦೬, ದಿನಾಂಕ:೧೨.೭.೨೦೦೫.

**ಪ್ರಸ್ತಾವನೆ:**

ಮೇಲೆ (೧)ರಲ್ಲಿ ಓದಲಾದ ಸರ್ಕಾರದ ನಡವಳಿಯಲ್ಲಿ ಕಾನೂನು ಮಾಪನಶಾಸ್ತ್ರ ಇಲಾಖೆಗೆ ಸಂಬಂಧಿಸಿದಂತೆ ೨೨ ಗ್ರೂಪ್ ಡಿ ಹುದ್ದೆಗಳನ್ನು ಹಾಗೂ ೧ ಮೇಸ್ತ್ರಿ ಹುದ್ದೆಯನ್ನು ರದ್ದುಪಡಿಸಲು ನಿರ್ಣಯಿಸಲಾಗಿದೆ.

ಮೇಲೆ (೨)ರಲ್ಲಿ ಓದಲಾದ ಕಾನೂನು ಮಾಪನಶಾಸ್ತ್ರ ಇಲಾಖೆಯ ನಿಯಂತ್ರಕರ ಪತ್ರದಲ್ಲಿ ಅಧಿಕಾರಯುತ ಸಮಿತಿಯು ಕೈಗೊಂಡ ನಿರ್ಣಯದಂತೆ ಖಾಲಿ ಇರುವ ೨೨ ಗ್ರೂಪ್ ಡಿ ಹುದ್ದೆಗಳನ್ನು ರದ್ದುಪಡಿಸಲು ಆದೇಶ ಹೊರಡಿಸಬೇಕಾಗಿ ಕೋರಿರುತ್ತಾರೆ. ಅಲ್ಲದೆ ಅಧಿಕಾರಯುತ ಸಮಿತಿಯ ಸಭೆಯಲ್ಲಿ ೧ ಮೇಸ್ತ್ರಿ ಹುದ್ದೆಯನ್ನು ರದ್ದುಪಡಿಸಲು ತೀರ್ಮಾನಿಸಿದ್ದು, ಈ ಹುದ್ದೆಯನ್ನು ಈಗಾಗಲೇ ಶೇ.೫ರಷ್ಟು ಸಿಬ್ಬಂದಿಯನ್ನು ಕಡಿತಗೊಳಿಸಿದ ಆದೇಶದಲ್ಲಿ ರದ್ದುಪಡಿಸಲಾಗಿರುವುದಾಗಿ ತಿಳಿಸಿರುತ್ತಾರೆ.

ಈ ವಿಷಯವನ್ನು ಸರ್ಕಾರ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ ೯೯ ಇಎಫ್‌ಟಿ ೨೦೦೨(ಭಾ), ಬೆಂಗಳೂರು, ದಿನಾಂಕ:೮ನೇ ಆಗಸ್ಟ್ ೨೦೦೫.**

ಸರ್ಕಾರದ ಅಧಿಕಾರಯುತ ಸಮಿತಿಯ ಸಭೆಯ ನಡವಳಿಯನ್ವಯ ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ಖಾಲಿ ಇರುವ ಈ ಕೆಳಕಂಡ ೨೨ ಗ್ರೂಪ್ ಡಿ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲು ಆದೇಶಿಸಿದೆ.

೧. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಮಧುಗಿರಿ.
೨. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಅರಸೀಕೆರೆ.
೩. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ತರೀಕೆರೆ.
೪. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಪುತ್ತೂರು.

೫. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಕುಂದಾಪುರ.
೬. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಹುಣಸೂರು.
೭. ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರ ಕಛೇರಿ, ಚಿಕ್ಕಮಗಳೂರು.
೮. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಹುನಗುಂದ.
೯. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಸವಣೂರು.
೧೦. ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರ ಕಛೇರಿ, ಮಡಿಕೇರಿ.
೧೧. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಧಾರವಾಡ.
೧೨. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಕುಮಟ.
೧೩. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಬಳ್ಳಾರಿ.
೧೪. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಕೊಪ್ಪಳ
೧೫. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಹೊಸಪೇಟೆ.
೧೬. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಸಿಂಧನೂರು.
೧೭. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಯಾದಗಿರಿ.
೧೮. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಗುಲ್ಬರ್ಗಾ-೧
೧೯. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ತಿಪಟೂರು.
೨೦. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಚಿಕ್ಕಬಳ್ಳಾಪುರ.
೨೧. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಆಟೋ ಮತ್ತು ಟ್ಯಾಕ್ಸಿ ಘಟಕ, ದಾವಣಗೆರೆ.
೨೨. ಕಾನೂನು ಮಾಪನಶಾಸ್ತ್ರ ನಿರೀಕ್ಷಕರ ಕಛೇರಿ, ಮೈಸೂರು-೨.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1117

**ಎ.ಎಸ್.ವಿಶ್ವೇಶ್ವರಯ್ಯ**
ಪೀಠಾಧಿಕಾರಿ, ಆಹಾರ-೧ ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು ಗಂಗಾಪುರ ಗ್ರಾಮದ ಅಸುಂಡಿ ನಾಲಾ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ, ಉತ್ತರವಲಯ, ಬಿಜಾಪುರ/ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 19.03.2005ರ ಪತ್ರ ಸಂ: ಮುಇಂ:ಸನೀ(ಉ)/ಬಿಜೆಪಿ/ಭೂಸ್ವಾ/2004-05 ಕ್ಯಾಂಪ್: ಬೆಂಗಳೂರು.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 19.03.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು ಅಸುಂಡಿ ನಾಲಾ ಗಂಗಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ರಾಣೆಬೆನ್ನೂರಿನ ಮಾನ್ಯ ಸಿವಿಲ್ ನ್ಯಾಯಾಲಯದ (ಹಿರಿಯ ಶ್ರೇಣಿ) ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.3,73,380-00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 29.12.1983.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 6(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 29.03.1984.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಅವಾರ್ಡ್ ಘೋಷಿಸಿದ ದಿನಾಂಕ: 19.08.1985
- ಜಮೀನಿನ ಕಬ್ಜ ಪಡೆದ ದಿನಾಂಕ: 29.03.1985

ಐತೀರ್ಪಿನಂತೆ ಪರಿಹಾರಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ 18ರನ್ವಯ ರಾಣೆಬೆನ್ನೂರಿನ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿ ಮಾನ್ಯ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದುಕೊಂಡಿದ್ದಾರೆ.

| ಕ್ರ.ಸಂ. | ಎಲ್.ಎ.ಸಿ. ಪ್ರಕರಣ ಸಂ. | ನ್ಯಾಯಾಲಯದ ಆದೇಶದ ದಿನಾಂಕ | ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 11/89 | 04.04.2000 | 44:2ಬಿ | 8-21 | 3,73,380-00 |

ಮೇಲ್ಕಂಡ ಎಲ್.ಎ.ಸಿ. ಪ್ರಕರಣದಲ್ಲಿ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯ ಪತ್ರ ಸಂಖ್ಯೆ: ಲಾ 155 ಎಲ್‌ಬಿಎಸ್ 2001, ದಿನಾಂಕ: 19.02.2001ರಲ್ಲಿ ತೀರ್ಮಾನಿಸಿದೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ: ಸನೀಇ 80 ಭೂಸ್ವಾಪ್ರ 2005, ಬೆಂಗಳೂರು ದಿನಾಂಕ: 11ನೇ ಆಗಸ್ಟ್ 2005**

ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು ಗಂಗಾಪುರ ಗ್ರಾಮದ ಅಸುಂಡಿನಾಲಾ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ.ಸಿ. ಸಂಖ್ಯೆ:11:89ರಲ್ಲಿ ರಾಣೆಬೆನ್ನೂರಿನ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದ ತೀರ್ಪಿನಂತೆ ಲೆಕ್ಕಹಾಕಿದ ಪರಿಹಾರಧನ ರೂ.3,73,380-00 (ಮೂರು ಲಕ್ಷದ ಎಪ್ಪತ್ತ್ಮೂರು ಸಾವಿರದ ಮುನ್ನೂರ ಎಂಭತ್ತು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ: 12.06.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎನ್. ಮಂಜುನಾಥ್**

ಪಿ.ಆರ್.1159 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ, (ಸಣ್ಣ ನೀರಾವರಿ).

## ಕಾನೂನು ಸಚಿವಾಲಯ

**ವಿಷಯ :** ಶ್ರೀ ಬಿ. ಲಿಂಗರಾಜ್, ವಕೀಲರು, ದಾವಣಗೆರೆ ಇವರನ್ನು ದಾವಣಗೆರೆ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 19.01.2005ರ ಸರ್ಕಾರಿ ಆದೇಶ ಸಂಖ್ಯೆ: ಲಾ 64 ಎಲ್‌ಸಿಎಲ್ 2004.
2. ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ದಾವಣಗೆರೆ ಇವರ ಪತ್ರ ಸಂಖ್ಯೆ: ಡಿಜೆ-ಡಿವಿಜಿ:3262:2005 ದಿನಾಂಕ: 30.05.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 19.01.2005ರ ಸರ್ಕಾರಿ ಆದೇಶದಲ್ಲಿ ದಾವಣಗೆರೆ ಜಿಲ್ಲೆಯ, ದಾವಣಗೆರೆ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿತ್ತು.

ಸದರಿ ನೋಟರಿ ಹುದ್ದೆಗೆ ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ: 30.05.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ದಾವಣಗೆರೆರವರು ಅರ್ಜಿಗಳನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 64 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 21ನೇ ಜೂನ್ 2005**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ನೋಟರಿ ನಿಯಮಾವಳಿಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಬಿ. ಲಿಂಗರಾಜು, ವಕೀಲರು, ನಂ.226 ನಿಜಲಿಂಗಪ್ಪ ಬಡಾವಣೆ, ದಾವಣಗೆರೆ-4 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ದಾವಣಗೆರೆ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗಧಿಪಡಿಸಲಾದ ರೂ.1000 (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು ನೋಟರಿ ಕಾಯ್ದೆಯ (1952) ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಎ. ಬಾಬು ರವೀಂದ್ರನಾಥ್ ಪಟೇಲ್**

ಪಿ.ಆರ್.1161 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಆಡಳಿತ-2, ಕಾನೂನು ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿನ ವೈದ್ಯರು ದರ್ಜೆ-1 (ಪ್ರಕೃತಿ ಚಿಕಿತ್ಸೆ) ಹುದ್ದೆಗಳಿಗೆ ಕಾರ್ಯಕಾರಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 449 ಪಿಐಎಂ 99, ದಿನಾಂಕ: 20.11.2003.
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 38 ಸೇನಿಇ 96, ದಿನಾಂಕ: 1.8.96.
3. ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: 135/ ಸಿಬ್ಬಂದಿ-1: 2004-2005, ದಿನಾಂಕ: 16.12.2004.

**ಪ್ರಸ್ತಾವನೆ:**

ಸರ್ಕಾರವು ಮೇಲೆ (1) ಓದಲಾದ ಆದೇಶದ ಮೂಲಕ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಚಾಲ್ತಿಯಲ್ಲಿದ್ದ ವೈದ್ಯರು ದರ್ಜೆ-2 (ಪ್ರಕೃತಿ ಚಿಕಿತ್ಸೆ) ವೃಂದದ 02 ಹುದ್ದೆಗಳನ್ನು ವೈದ್ಯರು ದರ್ಜೆ-1 (ಪ್ರಕೃತಿ ಚಿಕಿತ್ಸೆ) ವೃಂದಕ್ಕೆ ಮೇಲ್ದರ್ಜೆಗೇರಿಸಿ ಆದೇಶಿಸಿದೆ. ಹಾಗೂ ಈ ಆದೇಶದ ಮೂಲಕ ಮೇಲ್ದರ್ಜೆಗೇರಿಸಿದ ಹುದ್ದೆಯನ್ನು ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳ ಅಡಿಯಲ್ಲಿ ಬಡ್ತಿ ಮೂಲಕ ಭರ್ತಿ

ಮಾಡಲು ಸೂಚಿಸಿದೆ. ನಿರ್ದೇಶಕರು. ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಮೇಲ್ದರ್ಜೆಗೇರಿಸಿದ ವೈದ್ಯರು ದರ್ಜೆ-1 (ಪ್ರಕೃತಿ ಚಿಕಿತ್ಸೆ) ಹುದ್ದೆಗಳ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರದೆ ಇರುವುದರಿಂದ ಮತ್ತು ಖಾಲಿ ಇರುವುದರಿಂದ ಹುದ್ದೆಗಳನ್ನು ಭರ್ತಿ ಮಾಡದೇ ಇರುವುದರಿಂದ ಇಲಾಖೆಯ ಅಭಿವೃದ್ಧಿ ದೃಷ್ಟಿಯಿಂದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ನೇಮಕಾತಿ ವಿಧಾನವನ್ನು ಕಲ್ಪಿಸಿ ಈ ವೃಂದ ಹುದ್ದೆಗಳನ್ನು ಶೀಘ್ರವಾಗಿ ಭರ್ತಿ ಮಾಡಲು ಕಾರ್ಯಕಾರಿ ಆದೇಶವನ್ನು ಹೊರಡಿಸಬೇಕೆಂದು ಕೋರಿದ್ದಾರೆ. ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನೇಮಕಾತಿ ವಿಧಾನವನ್ನು ನಿಗದಿಪಡಿಸದೇ ಇರುವ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಒಂದು ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಲು ಮೇಲೆ (2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಕಲ್ಪಿಸಿರುವ ಅವಕಾಶಗಳನ್ನು ಉಪಯೋಗಿಸಿ ವೈದ್ಯರು ದರ್ಜೆ-1 (ಪ್ರಕೃತಿ ಚಿಕಿತ್ಸೆ) ವೃಂದದ 02 ಹುದ್ದೆಗಳಿಗೆ ಒಂದು ಕಾರ್ಯಕಾರಿ ಆದೇಶವನ್ನು ಹೊರಡಿಸಲು ಸರ್ಕಾರ ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 619 ಪಿಐಎಂ 2004, ಬೆಂಗಳೂರು, ದಿನಾಂಕ: 8ನೇ ಆಗಸ್ಟ್ 2005**

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿನ ವೇತನ ಶ್ರೇಣಿ ರೂ. 7400-13120ರ ವೈದ್ಯರು ದರ್ಜೆ-1 (ಪ್ರಕೃತಿ ಚಿಕಿತ್ಸೆ) ಹುದ್ದೆಗೆ ಮೇಲೆ (2)ರಲ್ಲಿ ಓದಲಾದ ಅಧಿಕೃತ ಜ್ಞಾಪನ ಹಾಗೂ ಅದರಲ್ಲಿನ ಷರತ್ತು ಮತ್ತು ನಿಬಂಧನೆಗೊಳಪಟ್ಟು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ನೇಮಕಾತಿ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ......./ ಸೇನಿಡಿ....../ ದಿನಾಂಕ: 16.07.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ. ಹಾಗೂ ಈ ಆದೇಶವು ಹೊರಡಿಸಿದ ದಿನಾಂಕದಿಂದ 6 ತಿಂಗಳುಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಭಾಕರ್ ಎಂ. ಶೇಟ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 619 ಪಿಐಎಂ 2004 ದಿನಾಂಕ: 8ನೇ ಆಗಸ್ಟ್ 2005 ಕ್ಕೆ ಅನುಬಂಧ**

| ಕ್ರಮ ಸಂಖ್ಯೆ | ಹುದ್ದೆಗಳ ದರ್ಜೆ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|
| | | ಖಾಯಂ | ತಾತ್ಕಾಲಿಕ | | |
| 1 | 2 | 3 | | 4 | 5 |
| 1. | ವೈದ್ಯರು ದರ್ಜೆ-1 (ಪ್ರಕೃತಿ ಚಿಕಿತ್ಸೆ) ವೇತನ ಶ್ರೇಣಿ ರೂ.7400-13120 | 02 | - | ವೈದ್ಯರು ದರ್ಜೆ-2 (ಪ್ರಕೃತಿ ಚಿಕಿತ್ಸೆ) ವೃಂದದಿಂದ ಪದೋನ್ನತಿಯ ಮೂಲಕ | ವೈದ್ಯರು ದರ್ಜೆ-2 (ಪ್ರಕೃತಿ ಚಿಕಿತ್ಸೆ) ವೃಂದದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸಿರಬೇಕು. ಪರಂತು 5 ವರ್ಷಗಳ ಸೇವೆಯನ್ನು ಸದರಿ ವೃಂದದಲ್ಲಿ ಪೂರೈಸಿರುವ ಅಧಿಕಾರಿಗಳು ಇಲ್ಲದಿದ್ದಲ್ಲಿ 3 ವರ್ಷಗಳ ಸೇವೆಯನ್ನು ಪೂರೈಸಿರುವ ಅಧಿಕಾರಿಗಳನ್ನು ಗಣನೆಗೆ ತೆಗೆದುಕೊಳ್ಳತಕ್ಕದ್ದು. |

**ಪ್ರಭಾಕರ್ ಎಂ. ಶೇಟ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.1162

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಅಲ್ಪಸಂಖ್ಯಾತರ ಮಕ್ಕಳ ಕ್ರೀಡಾಭ್ಯಾಸಕ್ಕಾಗಿ 2004-05ನೇ ಸಾಲಿನಲ್ಲಿ ವಸತಿ ಶಾಲೆ ತೆರೆಯುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಕಇ 6 ಅಅನಿ 2005, ದಿನಾಂಕ: 30.03.2005

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ ದಿನಾಂಕ: 30.03.2005ರ ಸರ್ಕಾರಿ ಆದೇಶದಲ್ಲಿ ಅಲ್ಪಸಂಖ್ಯಾತರ ವರ್ಗದವರಿಗೆ ಈ ಕೆಳಕಂಡ 5 ಸ್ಥಳಗಳಲ್ಲಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ಆದೇಶಿಸಲಾಗಿದೆ.

1. ಬೀದರ್ 2. ಜೇವರ್ಗಿ 3. ಹುಬ್ಬಳ್ಳಿ 4. ಚಿಕ್ಕಮಗಳೂರು ಮತ್ತು 5. ಮಾಗಡಿ

ಬೀದರ್‌ಗೆ ಮಂಜೂರಾಗಿರುವ ವಸತಿ ಶಾಲೆಯನ್ನು ಬೀದರ್ ಜಿಲ್ಲೆಯ ಬೀದರ್ ತಾಲ್ಲೂಕಿನ ಬೊಮ್ಮಲಗಿ ಗ್ರಾಮದಲ್ಲಿ ಸ್ಥಾಪಿಸಲು ಸರ್ಕಾರವು ಬಯಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 101 ಅಸಂಯೋ 2005, ಬೆಂಗಳೂರು ದಿನಾಂಕ: 11ನೇ ಆಗಸ್ಟ್ 2005**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಸರ್ಕಾರದ ಆದೇಶ ಸಂಖ್ಯೆ: ಸಕಇ 6 ಅಅನಿ 2005 ದಿನಾಂಕ: 30.3.2005ನ್ನು ಭಾಗಶಃ ಮಾರ್ಪಡಿಸಿ ಬೀದರ್‌ನಲ್ಲಿ ಆರಂಭಿಸಲು ಆದೇಶಿಸಿರುವ ವಸತಿ ಶಾಲೆಯನ್ನು ಬೀದರ್ ಜಿಲ್ಲೆಯ ಬೀದರ್ ತಾಲ್ಲೂಕಿನ ಬೊಮ್ಮಲಗಿ ಗ್ರಾಮದಲ್ಲಿ ಆರಂಭಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಪ್ರಾಣದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್.1163

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2005-2006ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಒಂದನೇ ಕಂತಿನ ರಾಜ್ಯದ ಪಾಲಿನ ಹಣವನ್ನು ರಾಜ್ಯದ 26 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :**
1. ಆರ್ಥಿಕ (ಜಿಪಂ) ರವರ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಜಡ್‌ಪಿಎ 2005 ಬೆಂಗಳೂರು ದಿನಾಂಕ: 25.04.2005.
2. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17014:10:2005 ಡಿಆರ್‌ಡಿಎ (ಎಸ್‌ಆರ್ ನಂ.15) ದಿನಾಂಕ: 13.04.2005.
3. ಸರ್ಕಾರದ ಆದೇಶ ಸಮಸಂಖ್ಯೆ ದಿನಾಂಕ: 30.05.2005.
4. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17014:10:2005 ಡಿಆರ್‌ಡಿಎ (ಎಸ್‌ಆರ್ ನಂ.36) ದಿನಾಂಕ: 29.06.2005.
5. ಸರ್ಕಾರದ ಆದೇಶದ ಸಂಖ್ಯೆ: ಎಫ್‌ಡಿ 07 ಜಿಪಿಎ 2003 ದಿನಾಂಕ: 14.07.05.

**ಪ್ರಸ್ತಾವನೆ:**

ಭಾರತ ಸರ್ಕಾರವು ಗುಲ್ಬರ್ಗಾ ಜಿಲ್ಲೆ ಹೊರತುಪಡಿಸಿದ ಉಳಿದ 26 ಜಿಲ್ಲೆಗಳಿಗೆ ಓದಲಾಗಿದೆ (2) ಮತ್ತು (5) ರಂತೆ ರೂ.4,54,92,000 ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರವು ಓದಲಾಗಿದೆ (3) ರನ್ವಯ ಕೇಂದ್ರ ಸರ್ಕಾರದ ದಿನಾಂಕ: 13.04.2005ರ ಬಿಡುಗಡೆಗನುಗುಣವಾಗಿ ರೂ.1,47,44,000 ಗಳನ್ನು ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಜಿಲ್ಲೆಗಳಿಗೆ ಬಿಡುಗಡೆ ಮಾಡಿತ್ತು. ಖಜಾನಾ ಗಣಕ ಕೇಂದ್ರದಲ್ಲಿ ಆದೇಶವನ್ನು ಅಳವಡಿಸಲು ಹೋದಾಗ ಈಗಾಗಲೇ ಆರ್ಥಿಕ ಇಲಾಖೆಯವರು ಹಣ ಬಿಡುಗಡೆ ಮಾಡಿರುವುದಾಗಿ ಖಜಾನಾಧಿಕಾರಿಗಳು ತಿಳಿಸಿದರು. ಪರಿಶೀಲಿಸಲಾಗಿ ಏಪ್ರಿಲ್ 2005 ರಿಂದ ಜೂನ್ 2005 ಅವಧಿಗೆ ಓದಲಾಗಿದೆ (1) ರಂತೆ ಆರ್ಥಿಕ ಇಲಾಖೆಯು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ರೂ.85,69,000 ಲಕ್ಷ ಬಿಡುಗಡೆ ಮಾಡಿದೆ. ಆದುದರಿಂದ ದಿನಾಂಕ: 30.05.2005ರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಆದೇಶದಂತೆ ಹಣ ಬಿಡುಗಡೆ ಮಾಡಲು ಅವಕಾಶವಿಲ್ಲದೇ ಇರುವುದರಿಂದ ಉಳಿಕೆ ಹಣ ಮಾತ್ರ ಬಿಡುಗಡೆ ಮಾಡಲು ಸಾಧ್ಯವೆಂದು ತಿಳಿಸಿರುತ್ತಾರೆ. ಏತನ್ಮಧ್ಯೆ ಕೇಂದ್ರ ಸರ್ಕಾರವು ಓದಲಾಗಿದೆ (4)ರಂತೆ ಹಾವೇರಿ ಜಿಲ್ಲೆಗೆ ರೂ.11,48,000 ಗಳನ್ನು ಬಿಡುಗಡೆ ಮಾಡಿದೆ. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 07 ಜಡ್‌ಪಿಎ 2003 ದಿನಾಂಕ: 08.09.2004 ಮತ್ತು 14.07.2005 ರನ್ವಯ ಗುಲ್ಬರ್ಗಾ ಹೊರತುಪಡಿಸಿ ಉಳಿದ 26 ಜಿಲ್ಲೆಗಳಿಗೆ ರಾಜ್ಯದ ಪಾಲಿನ ಹಣ ಬಿಡುಗಡೆ ಮಾಡಲು ಉಲ್ಲೇಖ (3)ರಂತೆ ದಿನಾಂಕ: 30.05.2005 ರಂದು ಹೊರಡಿಸಲಾಗಿದ್ದ ಆದೇಶವನ್ನು ಹಿಂದಕ್ಕೆ ಪಡೆದು ಆರ್ಥಿಕ ಇಲಾಖೆಯು ಬಿಡುಗಡೆಗೊಳಿಸಿರುವ ಹಣವನ್ನು ಕಳೆದು ಉಳಿದ ಹಣ ರೂ.69,26,000 (ಅರವತ್ತೊಂಬತ್ತು ಲಕ್ಷದ ಇಪ್ಪತ್ತಾರು ಸಾವಿರ ಮಾತ್ರ) ಗಳನ್ನು ಬಿಡುಗಡೆ ಮಾಡಲು ಮರು ಆದೇಶ ಹೊರಡಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2005**

ರಾಜ್ಯ ಸರ್ಕಾರವು ಗುಲ್ಬರ್ಗಾ ಜಿಲ್ಲೆಯನ್ನು ಹೊರತುಪಡಿಸಿ ಉಳಿದೆಲ್ಲಾ ಜಿಲ್ಲೆಗಳಿಗೆ ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿರುವ ಹಣವನ್ನು ಹೊರತುಪಡಿಸಿ ಉಳಿದ ಹಣ ರೂ.69,26,000 (ಅರವತ್ತೊಂಬತ್ತು ಲಕ್ಷದ ಇಪ್ಪತ್ತಾರು ಸಾವಿರ ಮಾತ್ರ)ಗಳನ್ನು ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. (ಅನುಬಂಧ ಲಗತ್ತಿಸಿದೆ)

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75.25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು 06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-(ಯೋಜನೆ) 2005-2006 (2515-00-196-1-06) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003 ದಿನಾಂಕ: 08.09.2004 ಮತ್ತು 14.07.2005 ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2005-2006ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 329 ಪಿಬಿಎಸ್ 05 ದಿನಾಂಕ: 06.08.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 6 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2005**

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ದಿಂದ ಬಿಡುಗಡೆ ಯಾದ ಮೊದಲನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡಿದ್ದ ಮೊದಲನೇ ಕಂತು (30.05.05. ರಂದು) | ಆರ್ಥಿಕ ಇಲಾಖೆಯು ದಿನಾಂಕ: 24.04.05 ರಂದು ಬಿಡುಗಡೆ ಮಾಡಿರುವ ಹಣ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಹಣ (ಮೊದಲನೇ ಕಂತು) |
|---|---|---|---|---|---|---|---|
| 1. | ಬೆಂಗಳೂರು ನಗರ | 401 | 0100ZZ8001 | 15,45,000 | 5,15,000 | 3,75,000 | 1,40,000 |
| 2. | ಬೆಂಗಳೂರು (ಗ್ರಾ) | 402 | 0300ZZ8001 | 19,15,000 | 6,38,000 | 2,92,000 | 3,46,000 |
| 3. | ಬಾಗಲಕೋಟೆ | 461 | 2900ZZ0001 | 19,15,000 | 6,38,000 | 3,41,000 | 2,97,000 |
| 4. | ಬೆಳಗಾಂ | 413 | 2200ZZ0002 | 19,15,000 | 6,38,000 | 3,39,000 | 2,99,000 |
| 5. | ಬಳ್ಳಾರಿ | 418 | 3400ZZ0001 | 19,15,000 | 6,38,000 | 3,38,000 | 3,00,000 |
| 6. | ಬೀದರ್ | 419 | 3800ZZ5701 | 15,45,000 | 5,15,000 | 2,73,000 | 2,42,000 |
| 7. | ಬಿಜಾಪುರ | 414 | 2800ZZ9152 | 15,45,000 | 5,15,000 | 2,73,000 | 2,42,000 |
| 8. | ಚಾಮರಾಜನಗರ | 456 | 1000ZZ0001 | 15,45,000 | 5,15,000 | 2,73,000 | 2,42,000 |
| 9. | ಚಿಕ್ಕಮಗಳೂರು | 408 | 1800ZZ0017 | 19,15,000 | 6,38,000 | 3,39,000 | 2,99,000 |
| 10. | ಚಿತ್ರದುರ್ಗ | 403 | 1600ZZ0001 | 19,15,000 | 6,38,000 | 3,39,000 | 2,99,000 |
| 11. | ದಾವಣಗೆರೆ | 451 | 1700ZZ0002 | 19,15,000 | 6,38,000 | 3,39,000 | 2,99,000 |
| 12. | ದ. ಕನ್ನಡ | 409 | 1900ZZ0047 | 15,45,000 | 5,15,000 | 2,73,000 | 2,42,000 |
| 13. | ಧಾರವಾಡ | 415 | 2500ZZ8798 | 15,45,000 | 5,15,000 | 2,73,000 | 2,42,000 |
| 14. | ಗದಗ್ | 462 | 2600ZZ0001 | 15,45,000 | 5,15,000 | 2,73,000 | 2,42,000 |
| 15. | ಹಾಸನ | 410 | 1300ZZ0003 | 19,15,000 | 6,38,000 | 3,39,000 | 2,99,000 |
| 16. | ಕೊಡಗು | 411 | 1200ZZ0001 | 15,45,000 | 5,15,000 | 2,50,000 | 2,65,000 |
| 17. | ಕೋಲಾರ | 404 | 0700ZZ8002 | 21,84,000 | 7,28,000 | 3,86,000 | 3,42,000 |
| 18. | ಕೊಪ್ಪಳ | 466 | 1500ZZ0010 | 15,45,000 | 5,15,000 | 2,73,000 | 2,42,000 |
| 19. | ಮಂಡ್ಯ | 412 | 1100ZZ0001 | 19,15,000 | 6,38,000 | 3,39,000 | 2,99,000 |
| 20. | ಮೈಸೂರು | 407 | 0900ZZ0001 | 19,15,000 | 6,38,000 | 3,39,000 | 2,99,000 |
| 21. | ರಾಯಚೂರು | 420 | 3600ZZ0001 | 15,45,000 | 5,15,000 | 3,39,000 | 1,76,000 |
| 22. | ಶಿವಮೊಗ್ಗ | 405 | 1400ZZ0002 | 19,15,000 | 6,38,000 | 3,39,000 | 2,99,000 |
| 23. | ತುಮಕೂರು | 406 | 0800ZZ0001 | 19,15,000 | 6,38,000 | 2,92,000 | 3,46,000 |
| 24. | ಉಡುಪಿ | 457 | 2000ZZ0001 | 15,45,000 | 5,15,000 | 2,73,000 | 2,42,000 |
| 25. | ಉ. ಕನ್ನಡ | 416 | 3000ZZ0080 | 21,85,000 | 7,28,000 | 3,86,000 | 3,42,000 |
| 26. | ಹಾವೇರಿ | 463 | 2700ZZ0001 | 11,48,000 | - | 3,39,000 | 44,000 |
| 27. | ಗುಲ್ಬರ್ಗಾ * | 417 | 3200ZZ0003 | - | - | 3,39,000 | - |
| | | | **ಒಟ್ಟು:** | **4,54,92,000** | **1,47,77,000** | **85,69,000** | **69,26,000** |

*ಭಾರತ ಸರ್ಕಾರ ಗುಲ್ಬರ್ಗಾ ಜಿಲ್ಲೆಗೆ ಮೊದಲನೇ ಕಂತಿನ ಹಣ ಬಿಡುಗಡೆ ಮಾಡಿರುವುದಿಲ್ಲ ಆದುದರಿಂದ ರಾಜ್ಯದ ಪಾಲಿನ ಹಣ ಬಿಡುಗಡೆ ಮಾಡಿರುವುದಿಲ್ಲ.

**ಜಿ. ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್.1166